# ಪ್ರಸ್ತಾವನೆ

ಶಾಲಾ ಖಾತೆಯವರು ಪ್ರಾಥಮಿಕ ಶಾಲೆಯೊಳಗಿನ ೫, ೬, ೭ ಮತ್ತು ಮಾಧ್ಯಮಿಕ ಶಾಲೆಯೊಳಗಿನ ೧, ೨, ೩ ಇಯತ್ತೆಗಳ ಅಭ್ಯಾಸ ಕ್ರಮವನ್ನು ಒಂದೇ ಮಾಡಿರುವರು. ಮತ್ತು ಈ ಹೊಸ ಅಭ್ಯಾಸಕ್ರಮಕ್ಕೆ ಅನುಸರಿಸಿ ಸದ್ಯದ 'ನಮ್ಮ ವಿಶ್ವ'ವೆಂಬ ಪುಸ್ತಕ ಮಾಲೆಯನ್ನು ಪ್ರಸಿದ್ಧಮಾಡಿರುತ್ತದೆ. ಮಾನವನಿಗೂ ಮತ್ತು ನಿಸರ್ಗಕ್ಕೂ ಯಾವ ಪ್ರಕಾರದ ಸಂಬಂಧವಿರುತ್ತದೆಂಬ ಸಂಗತಿಯು ನಮಗೆ ಭೂಗೋಲದ ಅಭ್ಯಾಸದಿಂದಲೇ ತಿಳಿದು ಬರುತ್ತದೆ. ಆಯಾ ದೇಶಗಳ ಹವಾಮಾನದ ಮೇಲೆ ಅಲ್ಲಿಯ ಬೆಳೆ, ಪ್ರಾಣಿ ಮತ್ತು ವನಸ್ಪತಿಗಳ ಜೀವನವು ಅವಲಂಬಿಸಿರುತ್ತದೆ. ಮತ್ತು ಇವೆಲ್ಲವು ಮಾನವನ ಜೀವನದ ಮೇಲೆ ಯಾವಾಗಲೂ ಪರಿಣಾಮವನ್ನುಂಟುಮಾಡುತ್ತಿರುತ್ತವೆ. ಯಾವದೊಂದು ದೇಶದ ಸ್ವಾಭಾವಿಕವಾದ ಭೌಗೋಲಿಕ ಪರಿಸ್ಥಿತಿಯು ಗೊತ್ತಾದರೆ, ಅಲ್ಲಿ ವಾಸಿಸುವ ಜನಜೀವನವು ಯಾವ ಪ್ರಕಾರದ್ದಿರಬಹು ದೆಂಬದರ ಕಲ್ಪನೆಯು ಪರ್ಯಾಯದಿಂದ ತಿಳಿದು ಬರುತ್ತದೆ. ಅದರಂತೆ ಯಾವದೊಂದು ದೇಶದ ಜನರ ನಡೆನುಡಿ, ಉಡಿಗೆತೊಡಿಗೆ, ಆಹಾರ ಉದ್ಯೋಗ ವ್ಯವಸಾಯಗಳು ಗೊತ್ತಾದರೆ, ಆ ದೇಶದ ಸ್ವಾಭಾವಿಕವಾದ ಭೌಗೋಲಿಕ ಪರಿಸ್ಥಿತಿಯ ಬಗ್ಗೆ ಸುಲಭವಾಗಿ ಕಲ್ಪನೆಯಾಗುತ್ತದೆ. ಸದ್ಯದ ಪುಸ್ತಕದಲ್ಲಿ ಈ ಎರಡನೇ ರೀತಿಯನ್ನೇ ಉಪಯೋಗಿಸಿರುತ್ತದೆ. ಕೇವಲ ರಾಜಕೀಯ ವಿಭಾಗಗಳ ಕಡೆಗೆ ಲಕ್ಷ್ಯಕೊಡದೆ, ಸ್ವಾಭಾವಿಕ ವಿಭಾಗಗಳೊಳ ಗಿನ ಮಾನವನ ಜೀವನವನ್ನು ವರ್ಣಿಸಿ, ಶಕ್ಯವಿದ್ದ ಮಟ್ಟಿಗೆ ಆ ವರ್ಣನೆಯ ಸಂಗಡವೇ ಆಯಾ ವಿಭಾಗಗಳ ಭೌಗೋಲಿಕ ಸಂಗತಿಗಳನ್ನು ಪೋಣಿಸಲಿಕ್ಕೆ ಪ್ರಯತ್ನ ಮಾಡಿದ್ದೇವೆ. ವಿಷಯವು ಸುಲಭವಾಗಿ ಮನವರಿಕೆಯಾಗಬೇಕೆಂದು ಸಾಕಷ್ಟು ಚಿತ್ರಗಳನ್ನೂ, ನಕಾಶೆಗಳನ್ನೂ ಅವಶ್ಯವಿದ್ದಲ್ಲಿ ಕೊಡಲಾಗಿದೆ. ಪ್ರತಿಯೊಂದು ಅಧ್ಯಾಯದ ಕೊನೆಗೆ ಅಭ್ಯಾಸಕ್ಕಾಗಿ ಸಾಕಷ್ಟು ಪ್ರಶ್ನೆಗಳನ್ನೂ ಕೊಡಲಾಗಿದೆ.

ಹೊಸ ಅಭ್ಯಾಸಪತ್ರಿಕೆಯಂತೆ ಪ್ರಾದೇಶಿಕ ಭೂಗೋಲದ ಬಗ್ಗೆ ಆಯಾ ಪ್ರಾದೇಶಿಕ ವಿದ್ಯಾರ್ಥಿಗಳಿಗೆ ಹೆಚ್ಚಿನ ಸಂಗತಿಗಳನ್ನು ಕಲಿಸಬೇಕಾದ್ದರಿಂದ, ಈ ಪುಸ್ತಕದಲ್ಲಿ ವಿಶಾಲ ಕರ್ನಾಟಕ, ಮುಂಬಯಿ ಕರ್ನಾಟಕಗಳ ಬಗ್ಗೆ ಚಿಕ್ಕ ಮಕ್ಕಳಿಗೆ ಸಹಜವಾಗಿ ಮನವರಿಕೆಯಾಗುವಂಥ ಸಂಗತಿಗಳನ್ನು ಕೂಲಂಕಷ ವಾಗಿ ವಿವರಿಸಿದೆ. ಚಿಕ್ಕ ಚಿಕ್ಕ ಪಯಣಗಳನ್ನೇರ್ಪಡಿಸಿ, ಹುಡುಗರನ್ನು

ಬೇರೆ ಬೇರೆ ಸ್ಥಳಗಳಿಗೆ ಕರೆದೊಯ್ದು, ಆಯಾ ಸ್ಥಳಗಳ ಮಳೆಬೆಳೆ, ಜನ ಜೀವನ, ಉದ್ಯೋಗ ವ್ಯವಸಾಯ ಮುಂತಾದ ಸಂಗತಿಗಳನ್ನು ಪ್ರತ್ಯಕ್ಷವಾಗಿ ತೋರಿಸುವದು ಒಳಿತು.

ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಅಭ್ಯಾಸ ಕ್ರಮದಲ್ಲಿ ವಿಶೇಷವಾದ ಬದಲಾವಣೆಯನ್ನು ಮಾಡಿರುವದರಿಂದ ಸದ್ಯಕ್ಕೆ ಉಪಯೋಗಿಸಲ್ಪಡುವ ಪಠ್ಯಪುಸ್ತಕಗಳು ಉಪಯೋಗವಾಗುವದಿಲ್ಲ. ಆದ್ದರಿಂದ ಹೊಸ ಅಭ್ಯಾಸ ಪತ್ರಿಕೆಗೆ ಸರಿಯಾಗಿ ಅನುಸರಿಸಿ 'ನಮ್ಮ ವಿಶ್ವ'ವೆಂಬ ಪುಸ್ತಕಮಾಲೆಯನ್ನು ಪ್ರಸಿದ್ಧಮಾಡಿರುತ್ತೇವೆ.

ಈ ಪುಸ್ತಕಗಳನ್ನು ಬರೆಯುವಾಗ ಬೇರೆ ಬೇರೆ ಇಂಗ್ಲೀಷ ಪುಸ್ತಕಗಳನ್ನೂ ಉಪಯೋಗ ಮಾಡಿದ್ದೇವೆ. ಅದರಲ್ಲೂ ಕೊಂಕಣ, ಮಹಾರಾಷ್ಟ್ರ ಮತ್ತು ಕರ್ನಾಟಕಗಳ ಬಗ್ಗೆ ಸಂಗತಿಗಳನ್ನು ಕೊಡುವಾಗ ನಮ್ಮ ಮಿತ್ರರೂ ಧಾರವಾಡ ಕರ್ನಾಟಕ ಕಾಲೇಜಿನ ಪ್ರಾಧ್ಯಾಪಕರೂ ಆದ ಸೀ. ಡೀ. ದೇಶಪಾಂಡೆ ಇವರು ಇತ್ತಲಾಗಿ ಬರೆದ 'ವೆಸ್ಟರ್ನ ಇಂಡಿಯಾ' ಎಂಬ ಪುಸ್ತಕವು ಬಹಳವಾಗಿ ಉಪಯೋಗವಾಯಿತು. ಪ್ರಾ. ದೇಶಪಾಂಡೆಯವರು ತಮ್ಮ ಪುಸ್ತಕದೊಳಗಿನ ಹಲವು ನಕಾಶೆಗಳನ್ನು ಈ ಪುಸ್ತಕದಲ್ಲಿ ಉಪಯೋಗಿಸಲಿಕ್ಕೆ ಅನುಮತಿಯನ್ನು ಕೊಟ್ಟದ್ದರಿಂದ ನಾವು ಅವರಿಗೆ ತುಂಬಾ ಋಣಿಯಾಗಿರುತ್ತೇವೆ.

ಶಿಕ್ಷಕರೂ, ಶಿಕ್ಷಣತಜ್ಞರೂ ಈ ಪುಸ್ತಕದ ಬಗ್ಗೆ ಉಪಯುಕ್ತವಾದ ಸೂಚನೆಗಳನ್ನು ಕೊಟ್ಟಲ್ಲಿ, ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಅವಶ್ಯವಾಗಿ ಹಾಕಲಾಗುವ ಬಗ್ಗೆ ಆಶ್ವಾಸನವನ್ನಿತ್ತು ಈ ಪ್ರಸ್ತಾವನೆಯನ್ನು ಮುಗಿಸುತ್ತೇವೆ.

ಗೋಕಾಕ,
ಜಾನೇವರಿ, ೧೯೫೦

ಕೃ. ನಾ. ದೇಶಪಾಂಡೆ
ಚಿ. ಬ. ಜೋಶಿ

## ೨ ನೇ ಆವೃತ್ತಿಯ ಪ್ರಸ್ತಾವನೆ

ಇದು ಕೇವಲ ಮೊದಲನೇ ಆವೃತ್ತಿಯ ಪುನರ್ಮುದ್ರಣವಿದ್ದು, ಅಲ್ಲಲ್ಲಿ ಉಳಿದ ದೋಷಗಳನ್ನು ತಿದ್ದಿರುತ್ತೇವೆ.

ಗೋಕಾಕ,
ಜೂನ, ೧೯೫೨

ಕೃ. ನಾ. ದೇಶಪಾಂಡೆ
ಚಿ. ಬ. ಜೋಶಿ

# ಅನುಕ್ರಮಣಿಕೆ

ಪಾಠ ಪುಟ



## ಆಭಾರ ಮನ್ನಣೆ


| | | |
|---|---|---|
| ಸುಏಝುದ ಕಾಲುವೆ | ಫೋಟೋ | ಟಾಯಿಮ್ಸ್ ಆಫ್ ಇಂಡಿಯಾ |
| ಪಾರ್ಲಿಮೆಂಟಿನ ಸಭಾಗೃಹ ಹೊಸದಿಲ್ಲಿ | ,, | ,, ,, |
| ಹರಿದ್ವಾರ-ಕುಂಭಮೇಳ | ,, | ,, ,, |
| ಕಲ್ಲಿದ್ದಲಿಯ ಕಣಿಯ ಒಳನೋಟ | ,, | ,, ,, |
| ಜಮಶೇಡಪೂರ | ,, | ಟಾಟಾ ಇಂಡಸ್ಟ್ರೀಜ |
| ಹುಗಳೀ ನದೀ | ,, | ಟಾಯಿಮ್ಸ್ ಆಫ್ ಇಂಡಿಯಾ |
| ಚಹದ ತೋಟ | ,, | ಲಿಪ್ಟನ್ (ಒವ್ಹರಸೀಜ) ಲಿಮಿಟೆಡ್ |
| ಹಿಂದುಸ್ಥಾನದ ಮಹಾದ್ವಾರ | ,, | ಜೆ. ಎಚ್. ಸೀ. |
| ಹತ್ತೀ ಬಿಡಿಸುವದು | ,, | ಟಾಯಿಮ್ಸ್ ಆಫ್ ಇಂಡಿಯಾ |
| ಓಯಾಸಿಸ್ | ,, | ,, ,, |

# ನಮ್ಮ ವಿಶ್ವವು

## ಮೊದಲನೇಯ ಪುಸ್ತಕವು

ಪಾಠ ೧

### ಪೃಥ್ವಿಯ ಆಕಾರವು

ನಮ್ಮೀ ಪೃಥ್ವಿಯು ದೊಡ್ಡದೊಂದು ಗೋಲದಂತಿರುತ್ತದೆ. ಪೃಥ್ವಿಯ ಆಕಾರವು ಚಂಡಿನಂತೆ ಇರುತ್ತದೆಂದು ನಾವು ಅನ್ನುತ್ತೇವೆ. ಆದರೆ ನಿಜವಾಗಿ ನೋಡಿದರೆ ಪೃಥ್ವಿಯು ಎರಡೂ ಬದಿಗಳಲ್ಲಿ ತುಸು ಚಪ್ಪಟೆಯಾಗಿರುತ್ತದೆ. ಅದು ಸಂಪೂರ್ಣವಾಗಿ ಗೋಲಾಗಿರುವದಿಲ್ಲ. ಪೃಥ್ವಿಯ ಈ ಎರಡೂ ಮಗ್ಗಲಿಗೆ ಧ್ರುವಗಳೆಂದೆನ್ನುತ್ತಾರೆ. ಒಂದಕ್ಕೆ ಉತ್ತರ ಧ್ರುವವೆಂತಲೂ ಇನ್ನೊಂದಕ್ಕೆ ದಕ್ಷಿಣ ಧ್ರುವವೆಂತಲೂ ಕರೆಯುತ್ತಾರೆ. ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವಗಳ ಮಧ್ಯದಲ್ಲಿ ಪೃಥ್ವಿಯ ಪೃಷ್ಠಭಾಗದ ಮೇಲೆ ಒಂದು ಕಾಲ್ಪನಿಕ ಗೆರೆಯನ್ನೆಳೆದರೆ, ಈ ಗೆರೆಯಿಂದ ಪೃಥ್ವಿಯ ಗೋಲದೊಳಗೆ ಎರಡು ಸರಿಯಾದ ಭಾಗಗಳುಂಟಾಗುವವು. ಈ ರೇಷೆಗೆ 'ವಿಷುವ ವೃತ್ತ'ವೆಂಬ ಹೆಸರು ಕೊಡಲ್ಪಟ್ಟಿದೆ. ಈ ವಿಷುವ ವೃತ್ತದ ಮೇಲಿನ ಪೃಥ್ವಿಯ ಆಕಾರವು ದೀರ್ಘ ವರ್ತುಲಾಕಾರವಾಗಿರುವದು. ಪೃಥ್ವಿಯ ಆಕಾರವನ್ನು ಕಿತ್ತಳೀ ಹಣ್ಣಿನ ಆಕಾರಕ್ಕೆ ಹೋಲಿಸಬಹುದು. ಈ ಹಣ್ಣಿನ ದೇಟನ್ನು ಕೆಳಗೆ ಮಾಡಿ ಮೇಜಿನ ಮೇಲಿಟ್ಟರೆ, ಆ ಹಣ್ಣು ಹೇಗೆ ಕಾಣುವದೋ ಅದೇ ಪ್ರಕಾರವಾಗಿ ಪೃಥ್ವಿಯ ಆಕಾರವಾದರೂ ಇರುವದು. ಆಕಾರದಲ್ಲಿ ಪೃಥ್ವಿಯು ಬಹು ದೊಡ್ಡದಾಗಿರುತ್ತದೆ. ಅದರ ವ್ಯಾಸವು ಸುಮಾರು ೭೯೦೦ ಮೈಲು ಇದ್ದು, ವಿಷುವ ವೃತ್ತದ ಮೇಲೆ ಪೃಥ್ವಿಯ ಪರಿಘವು ಸುಮಾರು ೨೫೦೦೦ ಮೈಲಿನಷ್ಟು ಇರುತ್ತದೆ.

ಕೆಳಗೆ ಕೊಟ್ಟ ಪೃಥ್ವಿಯ ಗೋಲದ ಚಿತ್ರಗಳನ್ನು ನೋಡಿರಿ (ಆ. ೧). ಪೃಥ್ವಿಯ ಬಹು ದೊಡ್ಡ ಭಾಗವು ನೀರಿನಿಂದ ವ್ಯಾಪಿಸಲ್ಪಟ್ಟಿದ್ದು ಆ ಮಾನದಿಂದ ನೆಲವು ಮಾತ್ರ ತುಸು ಇರುತ್ತದೆ. ಪೃಥ್ವಿಯ ಪೃಷ್ಠಭಾಗದ ಮೂರು ಪಾಲು ನೀರು ಇದ್ದು, ಒಂದು ಪಾಲು ಮಾತ್ರ ನೆಲವಿರುತ್ತದೆ. ಈಗ ಈ ಗೋಲದ




ಭೂಮಯ ಗೋಲಾರ್ಧ.




ಜಲಮಯ ಗೋಲಾರ್ಧ.

ಆಕೃತಿ ೧ ಪೃಥ್ವಿಯ ಮೇಲಿನ ನೀರು-ನೆಲಗಳ ಪ್ರಮಾಣವು

ಮೇಲೆ ನಮ್ಮ ಹಿಂದುಸ್ಥಾನ ದೇಶವನ್ನು ಕಂಡುಹಿಡಿಯಿರಿ. ಹಿಂದುಸ್ಥಾನವನ್ನು ಮಧ್ಯಬಿಂದುವನ್ನಾಗಿ ಮಾಡಿಕೊಂಡು ನೀವು ಪೃಥ್ವಿಯ ಗೋಲದ ಕಡೆಗೆ ನೋಡಿದರೆ, ಉತ್ತರ ಗೋಲಾರ್ಧದಲ್ಲಿ ನೀರಿಗಿಂತ ನೆಲವು ಹೆಚ್ಚಿಗೆ ಇದ್ದದ್ದನ್ನು ಕಾಣುವಿರಿ. ಆದರೆ ಇದರ ವಿರುದ್ಧವಾಗಿ ದಕ್ಷಿಣ ಗೋಲಾರ್ಧದೊಳಗೆ ಮಾತ್ರ ಭೂಭಾಗವು ಕಡಿಮೆ ಇದ್ದು ನೀರಿನ ಭಾಗವು ಹೆಚ್ಚಾಗಿರುತ್ತದೆ. ಪೃಥ್ವಿಯ ಈ ಗೋಲದ ಕಡೆಗೆ ನೀವು ತುಸು ಹೆಚ್ಚು ಲಕ್ಷಪೂರ್ವಕವಾಗಿ ನೋಡಿದರೆ ನಿಮಗೆ ಇನ್ನೂ ಎಷ್ಟೋ ಸೋಜಿಗವಾದ ಸಂಗತಿಗಳು ಸುಲಭವಾಗಿ ಕಂಡುಬರುವವು.

ಪೃಥ್ವಿಯ ಉತ್ತರ ಧ್ರುವವು ಸಮುದ್ರದಿಂದ ವ್ಯಾಪಿಸಲ್ಪಟ್ಟಿರುತ್ತದೆ. ಆದರೆ ದಕ್ಷಿಣ ಧ್ರುವದ ಹತ್ತರ ನೆಲವಿರುತ್ತದೆ. ಉತ್ತರ ಧ್ರುವದ ಮೇಲಿರುವ ಸಮುದ್ರದ ಸುತ್ತಲೂ ನೆಲವಿರುತ್ತದೆ. ಆದರೆ ಈ ನೆಲದ ಸುತ್ತು ಎರಡು ಕಡೆಗೆ ಮಾತ್ರ ಒಡಕಾಗಿರುತ್ತದೆ. ಇದರ ವಿರುದ್ಧವಾಗಿ ದಕ್ಷಿಣ ಧ್ರುವದ ಮೇಲಿರುವ ನೆಲದ ಸುತ್ತಲೂ ಅಖಂಡವಾದ ನೀರಿನ ಸುತ್ತು ಇರುತ್ತದೆ. ಉತ್ತರ ಧ್ರುವದ ಸುತ್ತಲೂ ಇರುವ ಭೂಮಿಯು ಎರಡು ಕಡೆಗೆ ಒಡಕಾಗಿರುವದರಿಂದ, ಅದರಲ್ಲಿ ಮೂರು ಭಾಗಗಳಾಗಿರುತ್ತವೆ. ಈ ಮೂರೂ ಭಾಗಗಳು ಆಕಾರದಲ್ಲಿ ಸಾಧಾರಣವಾಗಿ ತ್ರಿಕೋಣದಂತೆ ಇರುತ್ತವೆ. ಈ ಪ್ರತಿಯೊಂದು ತ್ರಿಕೋಣದ ತಳವು ಉತ್ತರ ದಿಕ್ಕಿನಲ್ಲಿ ಇದ್ದು, ಅದು ದಕ್ಷಿಣಕ್ಕೆ ಹೋದ ಹಾಗೆ ಮೊನೆಯಾಗುತ್ತ ಹೋಗಿರುತ್ತದೆ. ಮೊದಲನೇ ತ್ರಿಕೋಣವು ಅಮೇರಿಕಾ ಖಂಡವು. ಯುರೋಪ ಮತ್ತು ಆಫ್ರಿಕೆಗಳು ಕೂಡಿ ಆಗುವದು ಎರಡನೇ ತ್ರಿಕೋಣವು. ಮತ್ತು ಏಶಿಯಾ ಆಸ್ಟ್ರೇಲಿಯಾ ಕೂಡಿ ಆಗುವದೇ ಮೂರನೇ ತ್ರಿಕೋಣವು.

ಇದರ ವಿರುದ್ಧವಾಗಿ ದಕ್ಷಿಣ ಧ್ರುವದ ಕಡೆಯಿಂದ ನಾವು ಪೃಥ್ವಿಯ ಗೋಲದ ಕಡೆಗೆ ನೋಡಿದರೆ ಅಲ್ಲಿರುವ ಮಹಾಸಾಗರಗಳ ಆಕಾರವಾದರೂ ತ್ರಿಕೋಣದಂತೆಯೇ ಇದ್ದದ್ದು ಕಂಡುಬರುತ್ತದೆ. ಈ ತ್ರಿಕೋಣಗಳ ತಳಗಳಾದರೂ ದಕ್ಷಿಣಕ್ಕೆ ಇದ್ದು ಅವು ಉತ್ತರ ದಿಕ್ಕಿಗೆ ಮೊನೆಯಾಗುತ್ತ ಹೋಗಿರುತ್ತವೆಂಬದು ಕಂಡುಬರುತ್ತದೆ. ಪೃಥ್ವಿಯ ಪೃಷ್ಠಭಾಗದ ಮೇಲಿರುವ ಈ ನೆಲ ಮತ್ತು ನೀರಿನ ಭಾಗಗಳಿಗೆ ಈ ಪ್ರಕಾರದ ಆಕಾರಗಳು ಹೇಗೆ ಬಂದವು ಎಂಬದರ ಬಗ್ಗೆ ಬೇರೆ ಬೇರೆ ಶಾಸ್ತ್ರಜ್ಞರು ಬೇರೆ ಬೇರೆ ಎಷ್ಟೋ

ಕಲ್ಪನೆಗಳನ್ನು ಮಾಡಿದ್ದಾರೆ. ಪೃಥ್ವಿಯ ಉತ್ಪತ್ತಿಯು ಹೇಗಾಯಿತು ಎಂಬ ದರ ಕಲ್ಪನೆಯು ನಿಮಗೆ ತುಸು ಮಟ್ಟಿಗೆ ಇರುತ್ತದೆ. ಸೂರ್ಯನಿಂದಲೇ ಪೃಥ್ವಿಯು ಹುಟ್ಟಿತು. ಮತ್ತು ಮೊದಲಿನಿಂದಲೇ ಅದು ಗೋಲಾಕಾರ ವಾಗಿರುತ್ತದೆ. ಹುಟ್ಟಿದಾಗ ಪೃಥ್ವಿಯಾದರೂ ಸೂರ್ಯನಂತೆಯೇ ಪ್ರಖರ ವಾದ ವಾಯುರೂಪದಲ್ಲಿತ್ತು. ಆದರೆ ಕಾಲಾಂತರದಿಂದ ಅದರ ಪೃಷ್ಠಭಾಗವು ಆರಿ, ಅಲ್ಲಿ ನೀರು ಮತ್ತು ನೆಲಗಳು ಉಂಟಾದವು. ಬೇರೆ ಕೆಲವರು ಹೇಳು ವದೇನಂದರೆ, ಪೃಥ್ವಿಯ ಮೇಲಿನ ಭೂಮಿಯ ಭಾಗವೆಲ್ಲ ಅಖಂಡವಾಗಿತ್ತು. ಆದರೆ ಪೃಥ್ವಿಯು ತಂಪಾಗುತ್ತ ನಡೆದದ್ದರಿಂದ ಅದು ಆಕುಂಚನ ಹೊಂದಿ ಭೂಮಿಯ ಮೇಲೆ ದೊಡ್ಡ ದೊಡ್ಡ ಬಿರುಕುಗಳು ಬಿದ್ದು ಅವುಗಳಲ್ಲಿ ಕ್ರಮೇಣ ನೀರು ತುಂಬಿತು. ಈ ರೀತಿಯಿಂದ ನೆಲದ ಅಖಂಡತ್ವವು ಹೋಗಿ ಅದರ ಬೇರೆ ಬೇರೆ ಸ್ವತಂತ್ರವಾದ ಭಾಗಗಳಾದವು.

ಇನ್ನೂ ಕೆಲವು ಜನರು ಹೇಳುವದೇನಂದರೆ, ಪೃಥ್ವಿಯ ಹೊಟ್ಟೆಯೊಳ ಗಿನ ಕೆಲವೊಂದು ವಿಶಿಷ್ಟವಾದ ಚಲನ-ವಲನೆಗಳಿಂದ, ಪೃಷ್ಠಭಾಗದ ಮೇಲಿ ರುವ ನೆಲವು ಸೀಳಿತು. ಮತ್ತು ನೆಲದಲ್ಲಿ ಉಂಟಾದ ಈ ಭಾಗಗಳು ನಾವಕಾಶವಾಗಿ ದೂರ ಸರಿಯುತ್ತ ಹೋಗಿ ಕಟ್ಟಕಡೆಗೆ ಅವು ಸದ್ಯದ ಆಕಾರ ಗಳನ್ನು ಧರಿಸಿದವು. ಪೃಥ್ವಿಯ ಪೃಷ್ಠಭಾಗದ ಮೇಲಿರುವ ಸದ್ಯದ ನೀರು ನೆಲಗಳ ಆಕಾರಗಳನ್ನು ಕಂಡು ಈ ಬೇರೆ ಬೇರೆ ಕಲ್ಪನೆಗಳು ಶಾಸ್ತ್ರಜ್ಞರಿಗೆ ತೋರಿರುತ್ತವೆ. ಆದರೆ ಈ ಕಲ್ಪನೆಗಳಲ್ಲಿ ಇಂಥಾದ್ದೇ ಸರಿಯಾಗಿರುತ್ತದೆಂದು ಹೇಳಲಿಕ್ಕೆ ಬರುವದಿಲ್ಲ.

## ಪ್ರಶ್ನೆಗಳು

೧. ಪೃಥ್ವಿಯ ಯಾವ ಭಾಗಗಳಿಗೆ ಧ್ರುವಗಳೆಂದೆನ್ನುತ್ತಾರೆ ?

೨. ವಿಷುವ ವೃತ್ತವೆಂದರೇನು ? ಅದರ ಪರಿಘವೆಷ್ಟು ?

೩. ಪೃಥ್ವಿಯ ಉತ್ಪತ್ತಿಯು ಹೇಗೆ ಆಯಿತು ?

೪. ನೀರು ನೆಲಗಳಿಗೆ ಉಂಟಾದ ಆಕಾರಗಳ ಬಗ್ಗೆ ಇರುವ ಬೇರೆ ಬೇರೆ ಕಲ್ಪನೆ ಗಳನ್ನು ವರ್ಣಿಸಿರಿ.

ಪಾಠ ೨

# ಪೃಥ್ವಿಯ ಮೇಲಿನ ಭೂ ಭಾಗಗಳು

ಪೃಥ್ವಿಯು ಗೋಲಾಕಾರವಾಗಿದ್ದರೂ, ನೆಲವು ಇದ್ದಲ್ಲೆಲ್ಲ ಅದರ ಪೃಷ್ಠ ಭಾಗವು ಹುರುಬರಕಾಗಿರುವದು. ಅದು ಕೆಲವೆಡೆಯಲ್ಲಿ ಎತ್ತರವಾಗಿಯೂ, ಬೇರೆ ಕಡೆಯಲ್ಲಿ ತಗ್ಗಾಗಿಯೂ, ಇನ್ನೂ ಬೇರೆ ಕಡೆಯಲ್ಲಿ ಸಪಾಟಾಗಿಯೂ ಇರುತ್ತದೆ. ಎತ್ತರವಾಗಿದ್ದರೆ ಅದಕ್ಕೆ ಗುಡ್ಡ ಅಥವಾ ಪರ್ವತಗಳೆಂತಲೂ, ತಗ್ಗಾಗಿದ್ದರೆ ಅದಕ್ಕೆ ಕೊಳ್ಳ ಅಥವಾ ಕಂದರವೆಂತಲೂ ಮತ್ತು ಸಪಾಟಾಗಿದ್ದರೆ ಅದಕ್ಕೆ ಬೈಲು ಎಂತಲೂ ಅನ್ನುತ್ತಾರೆ.

ಭೂಮಿಯ ದೊಡ್ಡ ಭಾಗಕ್ಕೆ **ಖಂಡ**ವೆಂದೆನ್ನುತ್ತಾರೆ. ಏಶಿಯಾ, ಯುರೋಪ, ಆಫ್ರಿಕಾ, ಅಮೇರಿಕಾ ಮತ್ತು ಆಸ್ಟ್ರೇಲಿಯಾ ಎಂಬ ಐದು ಖಂಡಗಳಿರುತ್ತವೆ. ಇವುಗಳ ಹೊರ್ತಾಗಿ ದಕ್ಷಿಣ ಧ್ರುವದ ಸುತ್ತಲೂ ಇರುವ ಭೂಭಾಗಕ್ಕೆ 'ಅಂಟಾರ್ಕ್ಟಿಕಾ' ಖಂಡವೆಂದೆನ್ನುತ್ತಾರೆ. ಇದು ಆರನೇ ಖಂಡವು. ಆದರೆ ಅಲ್ಲಿ ಬಹಳ ಚಳಿ ಇರುವದರಿಂದ, ಅಲ್ಲಿಯ ನೆಲವು ಹನ್ನೆರಡೂ ತಿಂಗಳು ಹಿಮಾಚ್ಛಾದಿತವಾಗಿರುತ್ತದೆ. ಅಲ್ಲಿ ಯಾವ ತರದ ಗಿಡಗಂಟಿಗಳೂ ಬೆಳೆಯುವದಿಲ್ಲ. ಅಲ್ಲಿ ಜನವಸತಿಯಾದರೂ ಇರುವದಿಲ್ಲ. ಆದ್ದರಿಂದ ನಾವು ಈ ಆರನೇ ಖಂಡದ ಬಗ್ಗೆ ವಿಚಾರವನ್ನೂ ಮಾಡುವದಿಲ್ಲ. ಯಾವಾಗಲೂ ನಾವು ಮೊದಲಿನ ಐದು ಖಂಡಗಳ ಬಗ್ಗೆ ಮಾತ್ರ ವಿಚಾರ ಮಾಡುತ್ತೇವೆ.

ಈ ಐದೂ ಖಂಡಗಳಲ್ಲಿ ಏಶಿಯಾ ಖಂಡವು ಎಲ್ಲ ಖಂಡಗಳಿಗಿಂತಲೂ ಹೆಚ್ಚು ವಿಸ್ತಾರವಾದದ್ದು. ನಮ್ಮ ಭರತಖಂಡವು ಇದೇ ಖಂಡದಲ್ಲಿರುತ್ತದೆ. ಜಗತ್ತಿನೊಳಗಿನ ಜನಸಂಖ್ಯೆಯ ಅರ್ಧದಷ್ಟು ಜನಸಂಖ್ಯೆಯು ಇದೊಂದೇ ಖಂಡದಲ್ಲಿರುತ್ತದೆ. ಹಿಮಾಲಯದಂಥ ಅತಿ ಉನ್ನತವಾದ ಪರ್ವತಾವಳಿಯೂ, ಪಾಮೀರದಂಥ ಅತಿ ದೊಡ್ಡ ತಪ್ಪಲು ಭೂಮಿಯೂ ಮತ್ತು ಸಿಂಧೂ-ಗಂಗಾ ಹೊಳೆಗಳ ಕೊಳ್ಳಗಳಂಥ ಎಷ್ಟೋ ಕೊಳ್ಳಗಳೂ ಇದೇ ಖಂಡದಲ್ಲಿರುತ್ತವೆ.

ಏಶಿಯಾ ಖಂಡದ ಪಶ್ಚಿಮಕ್ಕೆ ಅದಕ್ಕೆ ಹೊಂದಿಕೊಂಡು ಯುರೋಪ ಖಂಡವಿರುತ್ತದೆ. ಯುರೋಪ ಮತ್ತು ಏಶಿಯಾ ಖಂಡಗಳು ಕೂಡಿಯೇ




ಆಕೃತಿ ೨ ಪೃಥ್ವಿಯ ಮೇಲಿನ ಭೂ–ಭಾಗವೂ ಜಲ–ಭಾಗವೂ

'ಯುರೇಶಿಯಾ' ಎಂಬ ದೊಡ್ಡದಾದ ಒಂದೇ ಖಂಡವಾಗಿರುತ್ತದೆಂದು ಕೆಲವರು ಅನ್ನುತ್ತಾರೆ. ಯುರೋಪದ ಜನರು ಭೌತಿಕ ಶಾಸ್ತ್ರದೊಳಗೆ ಬಹಳ ಮುಂದುವರಿದು ತಮ್ಮ ಬಲವನ್ನು ಬಹಳವಾಗಿ ಬೆಳಿಸಿಕೊಂಡಿದ್ದಾರೆ. ಈ ಬಲದಿಂದ ಅವರು ಜಗತ್ತಿನ ಬಹು ದೊಡ್ಡ ಭಾಗವನ್ನು ಆಕ್ರಮಿಸಿ ಜಗತ್ತಿನ ಮುಂದಾಳುತನವನ್ನು ವಹಿಸಿಕೊಂಡಿದ್ದಾರೆ.

ಯುರೇಶಿಯಾ ಖಂಡವು ಪೂರ್ವ-ಪಶ್ಚಿಮವಾಗಿ ಹಬ್ಬಿರುತ್ತದೆ. ಆದರೆ ಅಮೇರಿಕಾ ಖಂಡವು ದಕ್ಷಿಣೋತ್ತರವಾಗಿ ಚಾಚಿರುತ್ತದೆ. ಈ ಖಂಡವು ಉತ್ತರ ಧ್ರುವದಿಂದ ಸರಿಯಾಗಿ ದಕ್ಷಿಣ ಧ್ರುವದ ವರೆಗೆ ಹಬ್ಬಿರುತ್ತದೆ. ಇದರ ಮಧ್ಯಭಾಗವು ತೀರ ಕಿರಿಯಗಲಾದ್ದರಿಂದ, ಈ ಖಂಡದೊಳಗೆ ಉತ್ತರ ಮತ್ತು ದಕ್ಷಿಣ ಅಮೇರಿಕೆಗಳೆಂದು ಎರಡು ಭಾಗಗಳಾಗಿರುತ್ತವೆ. ಕಳೆದ ನಾಲ್ಕು ನೂರು ವರುಷಗಳಲ್ಲಿ ಯುರೋಪ ಖಂಡದೊಳಗಿನ ಬೇರೆ ಬೇರೆ ದೇಶಗಳ ಜನರು ಅಮೇರಿಕೆಯಲ್ಲಿ ಹೋಗಿ ನೆಲಿಸಿದ್ದಾರೆ. ಅಲ್ಲಿಯ ಮೂಲ ನಿವಾಸಿಗಳನ್ನು ಬಹುಶಃ ನಾಮಶೇಷ ಮಾಡಿ, ಯುರೋಪಿಯನ್ನರು ಅಲ್ಲಿ ತಮ್ಮ ವಾಸ್ತವ್ಯವನ್ನು ಮಾಡಿದರು. ಅಮೇರಿಕಾ ಖಂಡವು ಬಹು ಧನಾಢ್ಯ ವಾದ ಪ್ರದೇಶವಾಗಿರುತ್ತದೆ. ಅದರಲ್ಲೂ ಉತ್ತರ ಅಮೇರಿಕೆಯಲ್ಲಿ ಖನಿಜ ಸಂಪತ್ತು ವಿಪುಲವಾಗಿರುತ್ತದೆ. ಹತ್ತೊಂಬತ್ತನೇ ಶತಮಾನದಲ್ಲಿ ಆರಂಭ ವಾದ ಯಾಂತ್ರಿಕ ಯುಗದಿಂದ ಉತ್ತರ ಅಮೇರಿಕೆಗೆ ಹೇಳಕೂಡದಷ್ಟು ಲಾಭವಾಯಿತು. ಸದ್ಯಕ್ಕೆ ಅಮೇರಿಕೆಯ ಜನರೇ ಜಗತ್ತಿನ ಮುಂದಾಳು ಗಳಾಗಿರುತ್ತಾರೆ.

ಯುರೇಶಿಯಾ ಖಂಡದ ದಕ್ಷಿಣಕ್ಕೆ ಆಫ್ರಿಕಾ ಖಂಡವು ಇರುತ್ತದೆ. ಇದಾದರೂ ಬಹು ವಿಸ್ತಾರವಾದ ಖಂಡವಾಗಿರುತ್ತದೆ. ವಿಷುವ ವೃತ್ತವು ಈ ಖಂಡದ ಮಧ್ಯಭಾಗದಲ್ಲಿ ಹಾದು ಹೋಗುವದರಿಂದ ಅದರಲ್ಲಿ ಎರಡು ಭಾಗ ಗಳಾಗಿರುತ್ತವೆ. ಅಂದರೆ ಈ ಖಂಡದ ಅರ್ಧ ಭಾಗವು ಉತ್ತರ ಗೋಲಾರ್ಧ ದಲ್ಲಿಯೂ ಉಳಿದ ಅರ್ಧ ಭಾಗವು ದಕ್ಷಿಣ ಗೋಲಾರ್ಧದಲ್ಲಿಯೂ ಇರುತ್ತವೆ. ಪೂರ್ವ ಕಾಲದಲ್ಲಿ ಈ ಖಂಡವು ಏಶಿಯಾ ಖಂಡಕ್ಕೆ ಸುಏಜ ಎಂಬ ಸಂಯೋಗ ಭೂಮಿಯಿಂದ ಜೋಡಿಸಲ್ಪಟ್ಟಿತ್ತು. ಆದರೆ ಸುಮಾರು ೭೫ ವರುಷಗಳ ಹಿಂದೆ ಈ ಸಂಯೋಗ ಭೂಮಿಯನ್ನು ಕಡಿದು ಅಲ್ಲಿ ಕಾಲುವೆಯನ್ನು ಮಾಡಿದರು. ಈ ಕಾಲುವೆಯಿಂದ ಕೆಂಪು ಸಮುದ್ರವು ಭೂಮಧ್ಯ ಸಮುದ್ರಕ್ಕೆ

ಜೋಡಿಸಲ್ಪಟ್ಟಿತು. ಆದ್ದರಿಂದ ಆಫ್ರಿಕಾ ಖಂಡವು ಏಶಿಯಾ ಖಂಡದಿಂದ ಬೇರೆ ಮಾಡಲ್ಪಟ್ಟಿತು. ಆಫ್ರಿಕಾ ಖಂಡದೊಳಗೆ ಖನಿಜಸಂಪತ್ತು ವಿಪುಲವಾಗಿರುವದರಿಂದ, ಹತ್ತೊಂಬತ್ತನೇ ಶತಮಾನದೊಳಗೆ ಯುರೋಪಿಯನ್ನರ ದೃಷ್ಟಿಯು ಇದರ ಕಡೆಗೆ ಹೋಯಿತು. ಮತ್ತು ಯುರೋಪ ಖಂಡದ ಬೇರೆ



ಆಕೃತಿ ೩ ಸುಏಜದ ಕಾಲುವೆಯು

ಬೇರೆ ದೇಶಗಳು ಈ ಖಂಡವನ್ನು ತಮ್ಮತಮ್ಮೊಳಗೆ ಹಂಚಿಕೊಂಡರು. ಈ ಖಂಡದೊಳಗಿನ ಬಹು ದೊಡ್ಡ ಭಾಗವು ಉಸುಕಿನ ಅರಣ್ಯಗಳಿಂದಲೂ, ದಟ್ಟಾಗಿ ಬೆಳೆದ ಹಳವುಗಳಿಂದಲೂ ವ್ಯಾಪಿಸಲ್ಪಟ್ಟಿದ್ದರಿಂದ ಇಲ್ಲಿಯ ಜನವಸತಿಯು ದಟ್ಟಾಗಿರುವದಿಲ್ಲ.

ಏಶಿಯಾ ಖಂಡದ ದಕ್ಷಿಣಕ್ಕೆ ನಡುಗಡ್ಡೆಗಳ ಒಂದು ಉದ್ದವಾದ ಮಾಲೆಯೇ ಹಬ್ಬಿರುತ್ತದೆ. ಈ ದ್ವೀಪಗಳ ಸಮೂಹಕ್ಕೆ ಆಸ್ಟ್ರೇಲೇಶಿಯಾ ಎಂದೆನ್ನುತ್ತಾರೆ. ಮತ್ತು ಈ ದ್ವೀಪಗಳ ಸಮೂಹದಲ್ಲಿರುವ ಎಲ್ಲಕ್ಕೂ ದೊಡ್ಡದಾದ ನಡುಗಡ್ಡೆಗೆ ಆಸ್ಟ್ರೇಲಿಯಾ ಎಂದು ಅನ್ನುತ್ತಾರೆ. ಈ ದ್ವೀಪವು

ಇದು ಪ್ರತ್ಯೇಕವಾಗಿರುವದರಿಂದಲೇ ಅದು ಖಂಡವೆಂದು ಎಣಿಸಲ್ಪಡುತ್ತದೆ. 'ಆಸ್ಟ್ರೇಲಿಯಾ' ಈ ಶಬ್ದದ ಅರ್ಥವು ದಕ್ಷಿಣದ ಕಡೆಯ ಭೂಮಿಯು ಎಂದಿರುತ್ತದೆ. ಈ ಖಂಡವು ಸಂಪೂರ್ಣವಾಗಿ ದಕ್ಷಿಣ ಗೋಲಾರ್ಧದೊಳಗೆ ಇರುತ್ತದೆ. ಈ ಖಂಡದೊಳಗಾದರೂ ಯುರೋಪದ ಜನರು ಕಳೆದ ಶತಮಾನದೊಳಗೆ ಪ್ರವೇಶ ಮಾಡಿದರು. ಅಲ್ಲಿಯ ಮೂಲನಿವಾಸಿಗಳನ್ನು ನಿರ್ಮೂಲ ಮಾಡಿ ಯುರೋಪಿಯನ್ನರು ಈ ಖಂಡದ ಕೆಲವು ಭಾಗಗಳಲ್ಲಿ ವಸಾಹತು ಮಾಡಿದರು. ಈಗ ಅಲ್ಲಿ ಬಿಳೇ ಜನರ ಹೊರತಾಗಿ ಬೇರೆಯವರಿಗೆ ಹೋಗಿ ನೆಲಿಸಲಿಕ್ಕೆ ಪ್ರತಿಬಂಧವಿರುತ್ತದೆ.

ತೀರ ದಕ್ಷಿಣಕ್ಕೆ ದಕ್ಷಿಣ ಧ್ರುವದ ಸುತ್ತಲೂ 'ಅಂಟಾರ್ಕ್ಟಿಕಾ' ಖಂಡವಿರುತ್ತದೆ. ಈ ಖಂಡದಲ್ಲಿ ಇದುವರೆಗೆ ಜನವಸತಿಯು ಇಲ್ಲದೇ ಇದ್ದರೂ, ಅದರ ಮೇಲಿನ ಸ್ವಾಮಿತ್ವದ ಬಗ್ಗೆ ಯುರೋಪ ಮತ್ತು ಅಮೇರಿಕೆಗಳ ನಡುವೆ ಜಗ್ಗಾಟವು ನಡೆದಿರುತ್ತದೆ. ಈ ಖಂಡದೊಳಗೆ ಖನಿಜಸಂಪತ್ತು ವಿಪುಲವಾಗಿರಬೇಕೆಂದು ಜನರ ಗ್ರಹಿಕೆ ಇರುತ್ತವೆ. ಆದ್ದರಿಂದ ಜಗತ್ತಿನೊಳಗಿನ ಬಲಾಢ್ಯ ರಾಷ್ಟ್ರಗಳು ಅದನ್ನು ತಮ್ಮ ವಶದಲ್ಲಿಟ್ಟುಕೊಳ್ಳಬೇಕೆಂದು ಹವಣಿಸಹತ್ತಿರುತ್ತವೆ.

ಏಶಿಯಾ, ಯುರೋಪ ಮತ್ತು ಆಫ್ರಿಕಾ ಈ ಖಂಡಗಳು ಒಂದಕ್ಕೊಂದು ಸಮೀಪವಾಗಿರುತ್ತವೆ. ಅಮೇರಿಕಾ ಖಂಡವು ಮಾತ್ರ ಅವುಗಳಿಂದ ಬೇರೆಯಾಗಿದ್ದು ದೂರದಲ್ಲಿರುತ್ತದೆ. ಅದು ಅರ್ವಾಚೀನ ಕಾಲದಲ್ಲಿಯೇ ಗೊತ್ತುಹಚ್ಚಲ್ಪಟ್ಟಿತು. ಆದ್ದರಿಂದ ಅದಕ್ಕೆ 'ಹೊಸ ಜಗತ್ತು' ಎಂದು ಕರೆಯುವ ರೂಢಿಯು ಬಿದ್ದಿರುತ್ತದೆ. ಮತ್ತು ಮೊದಲಿನ ಮೂರು ಖಂಡಗಳಿಗೆ 'ಹಳೇ ಜಗತ್ತು' ಎಂದು ಕರೆಯಹತ್ತಿದರು.

ಈ ಮುಖ್ಯವಾದ ಖಂಡಗಳಲ್ಲದೇ ಪೃಥ್ವಿಯ ಮೇಲೆ ಸಾವಿರಾರು ಸಣ್ಣ ದೊಡ್ಡ ದ್ವೀಪಗಳು ಇರುತ್ತವೆ. ಎಷ್ಟೋ ದ್ವೀಪಗಳ ಮೇಲೆ ಜನವಸತಿಯು ಇರುತ್ತದೆ. ಈ ದ್ವೀಪಗಳು ಯಾವ ಖಂಡದ ಸಮೀಪಕ್ಕೆ ಇರುವವೋ ಅದೇ ಖಂಡದಲ್ಲಿ ಅವು ಸಮಾವೇಶವಾಗುವವು.

## ಪ್ರಶ್ನೆಗಳು

೧. ಖಂಡವೆಂದರೇನು ? ಮುಖ್ಯವಾದ ಖಂಡಗಳು ಯಾವವು ? ಅವುಗಳಲ್ಲಿ ಅತೀ ದೊಡ್ಡ ಖಂಡವು ಯಾವದು ? ಮತ್ತು ಅತೀ ಸಣ್ಣ ಖಂಡವು ಯಾವದು ?

೨. 'ಹೊಸ ಜಗತ್ತು' ಎಂದು ಯಾವ ಖಂಡಕ್ಕೆ ಅನ್ನುತ್ತಾರೆ? ಮತ್ತು ಹಾಗೆ ಏಕೆ ಅನ್ನುತ್ತಾರೆ?
೩. ಆಫ್ರಿಕಾ ಖಂಡದ ಬಗ್ಗೆ ಗೊತ್ತಿದ್ದ ವಿಶಿಷ್ಟ ಸಂಗತಿಗಳನ್ನು ವರ್ಣಿಸಿರಿ.
೪. ಕೆಳಗೆ ಕೊಟ್ಟವುಗಳ ಮೇಲೆ ಟಿಪ್ಪಣಿ ಬರೆಯಿರಿ:
೧) ಸಂಯೋಗ ಭೂಮಿ, ೨) ಸುಏಜದ ಕಾಲುವೆ, ೩) 'ಅಂಟಾರ್ಕ್ಟಿಕಾ', ೪) 'ಹಳೇ ಜಗತ್ತು'.
೫. 'ಆಸ್ಟ್ರೇಲಿಯಾ' ಎಂಬ ಹೆಸರು ಬೀಳಲಿಕ್ಕೆ ಕಾರಣವೇನು? ಅಲ್ಲಿ ನೆಲಿಸಿದ್ದ ಜನರು ಯಾರು?

ಪಾಠ ೩

# ಪೃಥ್ವಿಯ ಮೇಲಿನ ನೀರಿನ ವಿಭಾಗಗಳು

ನೀರಿನ ಅತಿ ದೊಡ್ಡ ಸಂಚಯಕ್ಕೆ **ಮಹಾಸಾಗರ**ವೆಂದೆನ್ನುತ್ತಾರೆ. ಅಟಲಾಂಟಿಕ, ಹಿಂದೀ, ಪಸಿಫಿಕ್ ಮತ್ತು ಆರ್ಕ್ಟಿಕ್ ಎಂಬ ನಾಲ್ಕು ಮಹಾಸಾಗರಗಳಿರುತ್ತವೆ. ಒಂದು ಬದಿಗೆ ಯುರೋಪ-ಆಫ್ರಿಕಾ ಖಂಡಗಳಿದ್ದು ಇನ್ನೊಂದು ಬದಿಗೆ ಅಮೇರಿಕಾ ಇವುಗಳ ನಡುವೆ **ಅಟಲಂಟಿಕ್** ಮಹಾಸಾಗರವು ಇರುತ್ತದೆ. ಈ ಮಹಾಸಾಗರಕ್ಕೆ ಎರಡೂ ಬದಿಗಳಿಂದ ದೊಡ್ಡ ದೊಡ್ಡ ಹೊಳೆಗಳು ಹರಿದು ಬಂದು ಕೂಡುತ್ತವೆ. ಯುರೋಪ ಮತ್ತು ಅಮೇರಿಕಾ ಖಂಡಗಳು ಉದ್ಯೋಗ ವ್ಯವಸಾಯಗಳಿಂದ ತುಂಬಿ ತುಳುಕುತ್ತಿದ್ದು, ಅವುಗಳ ನಡುವೆ ಬಹು ದೊಡ್ಡ ಪ್ರಮಾಣದಿಂದ ವ್ಯಾಪಾರವು ಸಾಗುತ್ತದೆ. ಆದ್ದರಿಂದ ಈ ಮಹಾಸಾಗರದ ಮೇಲೆ ನೂರಾರು ಹಡಗಗಳು ಯಾವಾಗಲೂ ಓಡಾಡುತ್ತಿರುತ್ತವೆ. ೧೪೯೨ನೇ ಇಸವಿಯಲ್ಲಿ ಕೊಲಂಬಸನೆಂಬ ಪ್ರಸಿದ್ಧ ನಾವಿಕನು ಪಟದ ಹಡಗದೊಳಗಿಂದ ಯುರೋಪದಿಂದ ಅಮೇರಿಕೆಯವರೆಗೆ ಈ ಮಹಾ ಸಾಗರದೊಳಗಿಂದ ಪ್ರವಾಸ ಮಾಡಿದನು. ಉತ್ತರ ದಿಕ್ಕಿನಲ್ಲಿ ಈ ಮಹಾ ಸಾಗರವು 'ಆರ್ಕ್ಟಿಕ್' ಮಹಾ ಸಾಗರಕ್ಕೆ ಹೊಂದಿರುತ್ತದೆ.

ಒಂದು ಬದಿಗೆ ಅಮೇರಿಕೆಯೂ, ಇನ್ನೊಂದು ಬದಿಗೆ ಏಶಿಯಾ ಮತ್ತು ಆಸ್ಟ್ರೇಲಿಯಾ ಖಂಡಗಳು ಇದ್ದು, ಇವುಗಳ ಮಧ್ಯದಲ್ಲಿ **'ಪಸಿಫಿಕ್'** ಮಹಾಸಾಗರವು ಪಸರಿಸಿರುತ್ತದೆ. ಎಲ್ಲ ಮಹಾಸಾಗರಗಳಲ್ಲಿ ಇದು ಅತಿ ವಿಸ್ತಾರ

ವಾದದ್ದೂ, ಎಲ್ಲಕ್ಕೂ ಆಳವಾದದ್ದೂ ಆಗಿರುತ್ತದೆ. ಪೃಥ್ವಿಯ ಇಡೀ ಗೋಲದ ಒಂದುಮೂರಾಂಶದಷ್ಟು ಭಾಗವನ್ನು ಇದೊಂದೇ ಮಹಾಸಾಗರವು ವ್ಯಾಪಿಸಿರುತ್ತದೆ. ಇದರ ಆಳ ೩೦,೦೦೦ ಫೂಟು, ಅಂದರೆ ಸುಮಾರು ೫ ಮೈಲಿನಷ್ಟು ಇರುತ್ತದೆ. ಜಗತ್ತಿನೊಳಗಿನ ಅತಿ ಎತ್ತರವಾದ ಹಿಮಾಲಯ ಪರ್ವತವು ಪೆಸಿಫಿಕ್ ಮಹಾಸಾಗರದೊಳಗೆ ಸಹಜವಾಗಿ ಮುಳುಗುವದು. ಸಮುದ್ರ ಮಾರ್ಗದಿಂದ ಪೃಥ್ವಿಯ ಪ್ರದಕ್ಷಿಣೆಯನ್ನು ಮೊಟ್ಟಮೊದಲು ಮಾಡಿದ '**ಮಗೆಲನ್**' ಎಂಬ ಸಾಹಸಿಗನಾದ ನಾವಿಕನು, ಅಮೇರಿಕೆಯ ದಕ್ಷಿಣದ ತುದಿಯನ್ನು ಸುತ್ತಿ, ಅಟಲಾಂಟಿಕ್ ಮಹಾಸಾಗರವನ್ನು ಬಿಟ್ಟು, ಈ ಮಹಾಸಾಗರದೊಳಗೆ ಬಂದನು. ಆಗ ಅಟಲಾಂಟಿಕ್ ಮಹಾಸಾಗರಕ್ಕಿಂತಲೂ ಈ ಮಹಾಸಾಗರವು ಶಾಂತವಾಗಿರುವದನ್ನು ಕಂಡು, ಅವನು ಈ ಮಹಾಸಾಗರಕ್ಕೆ '**ಪೆಸಿಫಿಕ್**' ಅಂದರೆ 'ಶಾಂತ' ಎಂಬ ಹೆಸರನ್ನು ಇಟ್ಟನು. ಆದರೆ ಹೆಸರಿನ ತಕ್ಕಂತೆ ಅದು ಶಾಂತವಾಗಿರುವದಿಲ್ಲ. ಇದಲ್ಲದೆ ಈ ಮಹಾಸಾಗರದ ಸುತ್ತಲೂ ಜ್ವಾಲಾಮುಖೀ ಪರ್ವತಗಳ ಸಾಲುಗಳಿದ್ದು ಅಲ್ಲಿ ಆಗಾಗ್ಗೆ ಭೂಕಂಪಗಳಾಗುತ್ತವೆ. ಈ ಮಹಾಸಾಗರದೊಳಗೆ ಸಣ್ಣ ದೊಡ್ಡ ಸಾವಿರಾರು ನಡುಗಡ್ಡೆಗಳಿರುತ್ತವೆ. ಅವುಗಳಲ್ಲಿ ಎಷ್ಟೋ ನಡುಗಡ್ಡೆಗಳು ಸಮುದ್ರದೊಳಗೆ ಮುಳುಗುತ್ತಿರುತ್ತವಲ್ಲದೆ, ಇನ್ನೊಂದು ಕಡೆಗೆ ಹೊಸ ಹೊಸ ನಡುಗಡ್ಡೆಗಳು ಮೇಲಕ್ಕೇಳುತ್ತಿರುತ್ತವೆ. ಈ ಮಹಾಸಾಗರದ ಆಕಾರವು ಕುದುರೆಯ ನಾಲಿನಂತೆ ಇರುತ್ತದೆ. ಈ ಮಹಾಸಾಗರವಾದರೂ ಉತ್ತರ ದಿಕ್ಕಿನಲ್ಲಿ ಆರ್ಕ್ಟಿಕ್ ಮಹಾಸಾಗರಕ್ಕೆ ಹೊಂದಿರುತ್ತದೆ.

ಆಫ್ರಿಕೆಯ ಪೂರ್ವದಂಡೆ ಮತ್ತು ಆಸ್ಟ್ರೇಲಿಯದ ಪಶ್ಚಿಮದಂಡೆ ಇವುಗಳ ನಡುವೆ ಮತ್ತು ಹಿಂದುಸ್ಥಾನದ ದಕ್ಷಿಣಕ್ಕೆ ಹಿಂದೀ ಮಹಾಸಾಗರವು ಹಬ್ಬಿರುತ್ತದೆ. ಅಟಲಾಂಟಿಕ್ ಮತ್ತು ಪೆಸಿಫಿಕ್ ಮಹಾಸಾಗರಗಳಂತೆ ಹಿಂದೀ ಮಹಾಸಾಗರವು ಆರ್ಕ್ಟಿಕ್ ಮಹಾಸಾಗರಕ್ಕೆ ಹೊಂದಿಕೊಂಡಿರುವದಿಲ್ಲ. ಹಿಂದುಸ್ಥಾನ ದೇಶದಿಂದಲೇ ಇದಕ್ಕೆ ಹಿಂದೀ ಮಹಾಸಾಗರವೆಂಬ ಹೆಸರು ಬಿದ್ದಿರುತ್ತದೆ. ಪೂರ್ವಕಾಲದಲ್ಲಿ ಹಿಂದುಸ್ಥಾನದ ಸಂಗಡ ವ್ಯಾಪಾರ ಮಾಡಲಿಕ್ಕೆಂದು ಯುರೋಪದ ಜನರಿಗೆ ಇದೇ ಮಹಾಸಾಗರದ ಮಾರ್ಗದಿಂದ ಬರಬೇಕಾಗುತ್ತಿತ್ತು. ಆದ್ದರಿಂದ ಅವರು ಈ ಮಹಾಸಾಗರಕ್ಕೆ ಹಿಂದೀ ಮಹಾಸಾಗರವೆಂಬ ಹೆಸರನ್ನು ಕೊಟ್ಟರು.

ಪೃಥ್ವಿಯ ಉತ್ತರ ಧ್ರುವದ ಸುತ್ತಲೂ ಇರುವ ನೀರಿನ ದೊಡ್ಡ ಸಂಚಯಕ್ಕೆ **'ಆರ್ಕ್ಟಿಕ್'** ಮಹಾಸಾಗರವೆನ್ನುವರು. ಈ ಭಾಗದಲ್ಲಿ ಅತಿ ಚಳಿ ಇರುವದರಿಂದ ಈ ಮಹಾಸಾಗರದ ಪೃಷ್ಠಭಾಗವು ಯಾವಾಗಲೂ ಹೆಪ್ಪುಗಟ್ಟಿರುತ್ತದೆ. ಅಂಚಿನಲ್ಲಿ ಮಾತ್ರ ವರ್ಷದೊಳಗೆ ಎರಡು ತಿಂಗಳು ಈ ಬರ್ಫವು ಕರಗುತ್ತದೆ. ಒಟ್ಟಿನ ಮೇಲೆ ಈ ಮಹಾಸಾಗರವು ಹಡಗುಗಳ ಓಡಾಟಕ್ಕೆ ನಿರುಪಯೋಗವಾದದ್ದಿರುತ್ತದೆ. ಈ ಮಹಾಸಾಗರದೊಳಗೆ ಪ್ರವಾಸ ಮಾಡಿ ಉತ್ತರ ಧ್ರುವವನ್ನು ಮುಟ್ಟುವದಕ್ಕೆ ಎಷ್ಟೋ ಸಾಹಸದ ಪ್ರಯತ್ನಗಳಾಗಿರುತ್ತವೆ. ೧೯೦೯ನೇ ಇಸವಿಯಲ್ಲಿ ರಾಬರ್ಟ ಪೆರೀ ಎಂಬ ಹೆಸರಿನ ಅಮೇರಿಕೆಯ ಪರಿಶೋಧಕನು ಉತ್ತರ ಧ್ರುವವನ್ನು ಮುಟ್ಟಿದನು. ಆ ಮೇಲೆ ರಶಿಯಾ ದೇಶದ ಸಂಶೋಧಕರು ಈ ಮಹಾಸಾಗರದ ಬಗ್ಗೆ ಎಷ್ಟೋ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಈ ಪ್ರದೇಶವು ಹನ್ನೆರಡೂ ತಿಂಗಳು ಬರ್ಫಾಚ್ಛಾದಿತವಾಗಿರುವದರಿಂದ, ಈ ಬರ್ಫದ ಕೆಳಗೆ ಯಾವ ಪ್ರಾಣಿಗಳೂ ಇರಲಾರವೆಂಬ ಕಲ್ಪನೆ ಇತ್ತು. ಆದರೆ ರಶಿಯನ್ ಸಂಶೋಧಕರು ಅಲ್ಲಿ ಬಿಳೀ ಕರಡಿಗಳನ್ನೂ, ಬೇರೆ ಬೇರೆ ಪಕ್ಷಿಗಳನ್ನೂ ಕಂಡುಹಿಡಿದರಲ್ಲದೆ ಬರ್ಫದ ಆಚ್ಛಾದನದಲ್ಲಿ ಸೀಳಕುಗಳುಂಟಾಗಲು, ಕೆಳಗಿರುವ ನೀರಿನಲ್ಲಿ ಅವರು ಮೀನುಗಳನ್ನು ಸಹ ಕಂಡರು.

ಈ ನಾಲ್ಕು ಮಹಾಸಾಗರಗಳಲ್ಲಿ ಅಟಲಾಂಟಿಕ್, ಪಸಿಫಿಕ್ ಮತ್ತು ಹಿಂದೀ ಮಹಾಸಾಗರಗಳು ಅಂಟಾರ್ಕ್ಟಿಕಾ ಖಂಡದ ಸುತ್ತಲೂ ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ಆದ್ದರಿಂದ ಈ ಖಂಡದ ಸುತ್ತಲೂ ನೀರಿನ ಸಂಚಯವಿರುತ್ತದೆ. ಈ ಹೊಂದಿಕೊಂಡ ನೀರಿನ ಪಟ್ಟಿಗೆ **ದಕ್ಷಿಣ ಮಹಾಸಾಗರ**ವೆಂದೆನ್ನುತ್ತಾರೆ.

ಈ ಮಹಾಸಾಗರಗಳ ಮಾನದಿಂದ ಆಕಾರದೊಳಗೆ ಅವುಗಳಿಗಿಂತ ಚಿಕ್ಕದಾದ ಜಲಾಶಯಗಳಿಗೆ ಸಮುದ್ರ, ಉಪಸಾಗರ, ಸಾಮುದ್ರಧುನಿ, ಆಖಾತ, ಎಂಬ ಬೇರೆ ಬೇರೆ ಹೆಸರುಗಳಿರುತ್ತವೆ. ಇವುಗಳಲ್ಲಿ ಎಷ್ಟೋ ಜಲಾಶಯಗಳು ಮಹಾಸಾಗರಗಳ ಭಾಗಗಳೇ ಆಗಿರುತ್ತವೆ. ಹ್ಯಾಗಂದರೆ ಅರಬೀ ಸಮುದ್ರವೂ, ಬಂಗಾಲದ ಉಪಸಾಗರವೂ ಹಿಂದೀ ಮಹಾಸಾಗರದ ಭಾಗಗಳೇ ಆಗಿರುತ್ತವೆ. ಖಂಬಾಯತದ ಆಖಾತವು ಅರಬೀ ಸಮುದ್ರದಲ್ಲಿಯೇ ಸಮಾವೇಶವಾಗುತ್ತದೆ. ಎಷ್ಟೋ ಸಮುದ್ರಗಳು ಕಿರಿಯಗಲಾದ

ನೀರಿನ ಪಟ್ಟಿಯಿಂದ ಮಹಾಸಾಗರಕ್ಕೆ ಇಲ್ಲವೇ ಬೇರೊಂದು ಸಮುದ್ರಕ್ಕೆ ಜೋಡಿಸಲ್ಪಟ್ಟಿರುತ್ತವೆ. ಇಂಥ ಕಿರಿಯಗಲಾದ ನೀರಿನ ಪಟ್ಟಿಗೆ **'ಸಾಮುದ್ರ ಧುನಿ'** ಎಂಬ ಹೆಸರು. ಬಂಗಾಲದ ಉಪಸಾಗರವು ಅರಬೀ ಸಮುದ್ರಕ್ಕೆ ಪಾಲ್ಕ ಎಂಬ ಸಾಮುದ್ರಧುನಿಯಿಂದ ಜೋಡಿಸಲ್ಪಟ್ಟಿರುತ್ತದೆ. ಅದರಂತೆ ಜಿಬ್ರಾಲ್ಟರ ಎಂಬ ಸಾಮುದ್ರಧುನಿಯು ಅಟಲಾಂಟಿಕ್ ಮಹಾಸಾಗರವನ್ನು ಭೂಮಧ್ಯಸಮುದ್ರಕ್ಕೆ ಕೂಡಿಸುತ್ತದೆ. ಕಸ್ಪಿಯನ್ ಮತ್ತು ಅರಲ್ ಎಂಬ ಸಮುದ್ರಗಳು ಮಾತ್ರ ಸಂಪೂರ್ಣವಾಗಿ ನೆಲದಿಂದ ಸುತ್ತುಗಟ್ಟಲ್ಪಟ್ಟಿರುತ್ತವೆ. ಇವುಗಳ ನೀರು ಉಪ್ಪಾಗಿರುವದರಿಂದಲೇ ಇವುಗಳಿಗೆ ಸಮುದ್ರಗಳೆಂದೆನ್ನುತ್ತಾರೆ.

ಸೀನೀರಿನ ದೊಡ್ಡ ದೊಡ್ಡ ಜಲಸಂಚಯಗಳಿಗೆ **ಸರೋವರ**ಗಳೆಂದು ಅನ್ನುತ್ತಾರೆ. ಆಕಾರದಲ್ಲಿ ತೀರ ಸಣ್ಣದಿದ್ದ ಜಲಾಶಯಕ್ಕೆ ಕೆರೆ ಎಂದೆನ್ನುತ್ತಾರೆ. ಉತ್ತರ ಅಮೇರಿಕೆಯಲ್ಲಿಯೂ, ಆಫ್ರಿಕಾ ಖಂಡದಲ್ಲಿಯೂ ಎಷ್ಟೋ ದೊಡ್ಡ ದೊಡ್ಡ ಸರೋವರಗಳಿರುತ್ತವೆ. ಇವುಗಳಲ್ಲಿ ಉಗಿಹಡಗಗಳು ಬೇಕಾದ ಹಾಗೆ ಹೋಗಬಲ್ಲವು. ಕೆರೆಗಳಿಂದ ಕಾಲುವೆಗಳನ್ನು ಕಟ್ಟಿ ಹೊಲಗಳಿಗೆ ನೀರಿನ ಉಪಯೋಗವನ್ನು ಮಾಡಿಕೊಳ್ಳುತ್ತಾರೆ. ದಕ್ಷಿಣ ಹಿಂದುಸ್ಥಾನದಲ್ಲಿ, ಅದರಲ್ಲೂ ಮದ್ರಾಸ ಇಲಾಖೆಯೊಳಗೆ ಇಂಥ ಕೆರೆಗಳು ಬಹಳ ಇರುತ್ತವೆ.

## ಪ್ರಶ್ನೆಗಳು

೧. ಜಗತ್ತಿನೊಳಗೆ ಒಟ್ಟಿಗೆ ಮಹಾಸಾಗರಗಳು ಎಷ್ಟಿರುತ್ತವೆ? ಅವುಗಳಲ್ಲಿ ಅತಿ ದೊಡ್ಡ ಮಹಾಸಾಗರವು ಯಾವದು? ಅದರ ಬಗ್ಗೆ ಗೊತ್ತಿದ್ದನ್ನು ವರ್ಣಿಸಿರಿ.

೨. ಹಿಂದೀ, ಪೆಸಿಫಿಕ್ ಮತ್ತು ದಕ್ಷಿಣ ಮಹಾಸಾಗರಗಳಿಗೆ ಈ ಹೆಸರುಗಳು ಹೇಗೆ ಬಂದವು?

೩. ಕೆಳಗೆ ಕೊಟ್ಟವುಗಳ ಮೇಲೆ ಟಿಪ್ಪಣಿ ಬರೆಯಿರಿ:
೧) ಸಾಮುದ್ರಧುನಿ, ೨) ಸರೋವರ, ೩) ರಾಬರ್ಟ ಪೆರೀ.

೪. ಪೃಥ್ವಿಯ ದೊಡ್ಡ ನಕಾಶವನ್ನು ತೆಗೆದುಕೊಂಡು ಅದರಲ್ಲಿರುವ ಮಹತ್ವವಾದ ಸಮುದ್ರ, ಸಾಮುದ್ರಧುನಿ, ಆಖಾತಗಳನ್ನು ನೋಡಿ ಹೆಸರು ಬರೆಯಿರಿ.

೫. ಅಟಲಾಂಟಿಕ್ ಮತ್ತು ಪೆಸಿಫಿಕ್ ಮಹಾಸಾಗರಗಳಲ್ಲಿರುವ ಸಾಮ್ಯವೈಷಮ್ಯಗಳನ್ನು ಹೇಳಿರಿ.

ಪಾಠ ೪

# ಹವಾಮಾನವು

ಹವಾಮಾನದ ಬಗ್ಗೆ ವಿಚಾರಮಾಡುವಾಗ ಮುಖ್ಯವಾಗಿ ನಾವು ಲಕ್ಷ್ಯದಲ್ಲಿಡಬೇಕಾದ ಸಂಗತಿ ಎಂದರೆ: ಯಾವದೇ ಸ್ಥಳದ ಪ್ರತಿದಿವಸದ ಹವಾಮಾನವು ಆ ಸ್ಥಳದ ವರ್ಷದೊಳಗಿನ ಸರಾಸರಿ ಹವಾಮಾನದಿಂದ ತೀರ ಭಿನ್ನವಾಗಿರುತ್ತದೆ. ಯಾವದೇ ಒಂದು ಊರೊಳಗಿನ ಹವೆಯು ಒಂದು ದಿವಸ ತಂಪಾಗಿದ್ದರೆ ಇನ್ನೊಂದು ದಿವಸ ಉಷ್ಣವಾಗಿರುತ್ತದೆ. ಯಾವದೇ ಊರೊಳಗಿನ ಹವೆಯು ಇಡೀ ವರುಷದಲ್ಲಿ ಒಂದೇ ಸವನೇ ಎಂದೂ ಇರುವದಿಲ್ಲ. ಅದು ಯಾವಾಗಲೂ ಬದಲಾಗುತ್ತಿರುತ್ತದೆ. ಪ್ರತಿದಿವಸದ ಉಷ್ಣತಾಮಾನವನ್ನು ನೋಡಿ ಇಡೀ ವರುಷದ ಸರಾಸರೀ ನೋಡುತ್ತಾರೆ. ಅದರ ಮೇಲಿಂದ ಆ ಊರಿನ ವಾರ್ಷಿಕ ಹವಾಮಾನವು ತಂಪಾಗಿರುತ್ತದೆಯೋ ಅಥವಾ ಉಷ್ಣವಾಗಿರುತ್ತದೆಯೋ ಎಂಬದನ್ನು ನಿರ್ಣಯಿಸುತ್ತಾರೆ.

ಸೂರ್ಯನಿಂದ ನಮಗೆ ಸಿಗುವ ಉಷ್ಣತೆಯ ಮೇಲಿಂದಲೇ ನಾವು ಪ್ರತಿದಿವಸದ ಹವಾಮಾನದ ಬಗ್ಗೆ ಮುಖ್ಯವಾಗಿ ಊಹಿಸುತ್ತೇವೆ. ಸೂರ್ಯನ ಕಿರಣಗಳಿಂದ ನಮಗೆ ಪ್ರಕಾಶವು ದೊರೆಯುವಂತೆ, ಉಷ್ಣತೆಯಾದರೂ ಸಿಗುತ್ತದೆ. ಮುಂಜಾವಿನಲ್ಲಿ ಸೂರ್ಯನು ಕ್ಷಿತಿಜದ ಮೇಲೆ ಇದ್ದಾಗ ಆತನ ಕಿರಣಗಳು ಮಂದವಾಗಿರುತ್ತವೆ. ಆಗ ಬಿದ್ದ ಎಳೆಬಿಸಿಲಿನಲ್ಲಿ ನಾವು ಸಹಜವಾಗಿ ನಿಲ್ಲಬಲ್ಲೆವು. ಆದರೆ ಮಧ್ಯಾನ್ಹವಾಗುತ್ತ ಹೋದಂತೆ ಬಿಸಿಲು ಬಲಿಯುತ್ತ ಹೋಗುತ್ತದೆ. ಮತ್ತು ಮಧ್ಯಾನ್ಹದಲ್ಲಿ ಬಿಸಿಲು ಸುಡಹತ್ತುತ್ತದೆ. ಆದರೆ ಸಂಜೆಯಾದಂತೆ ಪುನಃ ಬಿಸಿಲು ಕಡಿಮೆಯಾಗುತ್ತ ಹೋಗಿ, ಸೂರ್ಯನು ಮುಳುಗಿದ ಕೂಡಲೇ ಹವೆಯಲ್ಲಿ ತಂಪು ಹುಟ್ಟುತ್ತದೆ. ಇದಲ್ಲದೆ ಸೂರ್ಯನಿಂದ ಬರುವ ಉಷ್ಣತೆಯು ಪ್ರತಿಯೊಂದು ಋತುವಿನಲ್ಲಿ ಭಿನ್ನ ಭಿನ್ನವಾಗಿರುತ್ತದೆ.

ಪೃಥ್ವಿಯ ಗೋಲದ ಮೇಲಿರುವ ನಮ್ಮ ಊರಿನ ಸ್ಥಾನದ ಮೇಲೆ ಸಹ ಸೂರ್ಯನಿಂದ ಬರುವ ಉಷ್ಣತೆಯೂ ಮತ್ತು ಅದರ ಪ್ರಮಾಣವೂ ಅವಲಂಬಿಸಿರುತ್ತದೆ. ವಿಷುವ ವೃತ್ತದ ಮೇಲೆ ಸೂರ್ಯನಿಂದ ಬರುವಷ್ಟು ಉಷ್ಣತೆಯು ವಿಷುವ ವೃತ್ತದಿಂದ ದಕ್ಷಿಣಕ್ಕೂ ಅಥವಾ ಉತ್ತರಕ್ಕೂ ಹೋದಂತೆ

ಸಿಗುವದಿಲ್ಲ. ಅಲ್ಲಿ ಸೂರ್ಯನ ಉಷ್ಣತೆಯು ಕಡಿಮೆಯಾಗುತ್ತ ಹೋಗುತ್ತದೆ. ಕೆಳಗಿನ ಚಿತ್ರದೊಳಗೆ ಸೂರ್ಯನಿಂದ ಹೊರಟ ಮೂರು ಅಷ್ಟಷ್ಟೇ ಪ್ರಮಾಣದ ಕಿರಣಶಲಾಕೆಗಳು ಪೃಥ್ವಿಯ ಮೇಲೆ ಮೂರು ಸ್ಥಳಗಳಲ್ಲಿ ಬಿದ್ದಿರುತ್ತವೆ. ವಿಷುವ ವೃತ್ತದ ಮೇಲೆ ಬಿದ್ದ ಕಿರಣಶಲಾಕೆಗಳು ವ್ಯಾಪಿಸಿದ ಸ್ಥಳಕ್ಕಿಂತಲೂ

ಉತ್ತರಧ್ರುವ




ದಕ್ಷಿಣಧ್ರುವ

ಆಕೃತಿ ೪ ಪೃಥ್ವಿಯ ಮೇಲೆ ಬೀಳುವ ಸೂರ್ಯನ ಕಿರಣಗಳು

ಉತ್ತರ ದಕ್ಷಿಣಗಳ ಕಡೆಗೆ ಬಿದ್ದ ಶಲಾಕೆಗಳು ಹೆಚ್ಚು ಸ್ಥಳವನ್ನು ವ್ಯಾಪಿಸಿರುತ್ತವೆ. ಮೂರೂ ಶಲಾಕೆಗಳಲ್ಲಿ ಅಷ್ಟಷ್ಟೇ ಉಷ್ಣತೆಯು ಇದ್ದರೂ ಕೂಡ ವಿಷುವ ವೃತ್ತದ ಮೇಲಿನ ಶಲಾಕೆಯು ತುಸು ಸ್ಥಳದ ಮೇಲೆ ಪಸರಿಸಿರುತ್ತದೆ. ಆದ್ದರಿಂದ ಅಲ್ಲಿ ಬಿಸಿಲು ಹೆಚ್ಚಾಗಿರುತ್ತದೆ. ಅದೇ ಉತ್ತರ-ದಕ್ಷಿಣ ಧ್ರುವಗಳ ಕಡೆಗೆ ಅಷ್ಟೇ ಉಷ್ಣತೆಯು ಹೆಚ್ಚು ಸ್ಥಳದ ಮೇಲೆ ಪಸರಿಸಿರುವದರಿಂದ ಅಲ್ಲಿ ಬಿಸಿಲು ಕಡಿಮೆಯಾಗಿರುತ್ತದೆ. ಇದಲ್ಲದೆ ಬೇರೆ ಬೇರೆ ಋತುಗಳಲ್ಲಿ ಹಗಲುಗಳು ಸಣ್ಣ ದೊಡ್ಡವಾಗುತ್ತವೆ. ಬೇಸಿಗೆಯಲ್ಲಿ ನಮಗೆ ಹೆಚ್ಚು ವೇಳೆಯವರೆಗೆ ಸೂರ್ಯನ ಕಿರಣಗಳು ದೊರೆಯುತ್ತವೆ. ಆದರೆ ಚಳಿಗಾಲದಲ್ಲಿ ಕಡಿಮೆ ವೇಳೆಯವರೆಗೆ ಸೂರ್ಯನು ಪ್ರಕಾಶಿಸುತ್ತಾನೆ.

ಸೂರ್ಯನ ಕಿರಣಗಳು ಮೊಟ್ಟಮೊದಲು ಹವೆಯೊಳಗಿಂದ ಹಾದು ಆ ಮೇಲೆ ಪೃಥ್ವಿಯ ಪೃಷ್ಠಭಾಗದ ಮೇಲೆ ಬೀಳುತ್ತವೆ. ಆದರೂ ಹವೆಯು ಕಾಯುವದಿಲ್ಲ. ಹವೆಗೆ ಪೃಥ್ವಿಯ ಪೃಷ್ಠಭಾಗದಿಂದಲೇ ಉಷ್ಣತೆಯು

ಸಿಗುತ್ತದೆ. ನೆಲವು ಕಾದನಂತರ ಅದಕ್ಕೆ ಹೊಂದಿಕೊಂಡಿದ್ದ ಹವೆಯ ತರವು ಮೊಟ್ಟಮೊದಲು ಕಾಯುತ್ತದೆ. ಅದರ ಮೇಲಿನ ತರವು ಆ ಮೇಲೆ ಕಾಯುವದು. ಆದರೆ ಅದು ಮೊದಲಿನ ತರದಷ್ಟು ಕಾಯುವದಿಲ್ಲ. ಈ ಪ್ರಕಾರವಾಗಿ ಪೃಥ್ವಿಯ ಪೃಷ್ಠಭಾಗದಿಂದ ಹೆಚ್ಚೆಚ್ಚು ಎತ್ತರ ಹೋದಂತೆ ಹವೆಯು ಕಡಿಮೆ ಪ್ರಮಾಣದಿಂದ ಕಾಯುತ್ತ ಹೋದದ್ದು ಕಂಡುಬರುತ್ತದೆ. ಗುಡ್ಡಗಳ ಮೇಲಿನ ಹವೆಯು ಬೈಲುಗಳ ಮೇಲಿನ ಹವೆಗಿಂತ ಹೆಚ್ಚು ತಂಪಾಗಿರುತ್ತದೆ. ಮಹಾಬಳೇಶ್ವರವು ವಾಯಿಯಿಂದ ೧೦-೧೨ ಮೈಲುಗಳ ಮೇಲಿದ್ದರೂ ಅಲ್ಲಿಯ ಹವೆಯು ಬಿಸಿಲುಗಾಲದಲ್ಲಿ ತಂಪಾಗಿರುತ್ತದೆ. ಆದರೆ ವಾಯಿಯೊಳಗಿನ ಬಿಸಿಲು ಹೆಚ್ಚಾಗಿರುತ್ತದೆ; ಯಾಕಂದರೆ ಮಹಾಬಳೇಶ್ವರವು ಎತ್ತರವಾದ ಗುಡ್ಡದ ಮೇಲಿರುತ್ತದೆ.




ಆಕೃತಿ ೫ ವಿರಲ ಮತ್ತು ದಟ್ಟ ಹವೆಯು

ಹವಾಮಾನದ ಬಗ್ಗೆ ವಿಚಾರಮಾಡುವಾಗ ಇನ್ನೊಂದು ಮಹತ್ವವಾದ ಸಂಗತಿಯೆಂದರೆ ವಾತಾವರಣದ (ಹವೆಯ) ಒತ್ತಡವು. ಹವೆಯು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅದು ನಮ್ಮ ಚರ್ಮಕ್ಕೆ ಗೋಚರವಾಗುತ್ತದೆ. ಕೈ ಬೀಸಿದರೆ ಹವೆಯ ಅಸ್ತಿತ್ವವು ನಮಗೆ ಗೊತ್ತಾಗುತ್ತದೆ. ಹವೆಗೆ ಭಾರವಾದರೂ ಇರುತ್ತದೆ. ಹವೆಯೊಳಗಿನ ಕಣಗಳು ವಿರಲವಾಗಿದ್ದರೆ ಅದರ ಭಾರವು ಕಡಿಮೆಯಾಗುತ್ತದೆ. ಕಣಗಳು ದಟ್ಟವಾಗಿದ್ದರೆ ಅದರ ಭಾರವು ಹೆಚ್ಚಾಗಿರು

ತ್ತದೆ. ಹವೆಯು ತಂಪಾಗಿದ್ದರೆ ಅದರ ಕಣಗಳು ದಟ್ಟಾಗಿ ಹವೆಯ ಭಾರವೂ ಮತ್ತು ಒತ್ತಡವೂ ಹೆಚ್ಚಾಗುತ್ತದೆ. ಆದ್ದರಿಂದ ತಂಪು ಹವೆಯ ಪ್ರದೇಶದಲ್ಲಿ ಹೆಚ್ಚು ಒತ್ತಡದ ಸ್ಥಳವಿರುತ್ತದೆ. ಇದಕ್ಕೆ ವಿರುದ್ಧವಾಗಿ ಹವೆಯು ಕಾಯಲು ಅದರ ಕಣಗಳು ವಿರಲವಾಗಿ ಅದು ಮೊದಲಿಗಿಂತ ಹೆಚ್ಚು ಸ್ಥಳವನ್ನು ವ್ಯಾಪಿಸುತ್ತದೆ. ಆದ್ದರಿಂದ ಅದು ಹಗುರಾಗುತ್ತದೆ. ಮತ್ತು ಅಂಥ ಸ್ಥಳದಲ್ಲಿ ಕಡಿಮೆ ಒತ್ತಡದ ಪ್ರದೇಶವು ಉಂಟಾಗುತ್ತದೆ. ಕಡಿಮೆ ಒತ್ತಡದ ಪ್ರದೇಶಗಳ ಕಡೆಗೆ ಹೆಚ್ಚು ಒತ್ತಡದ ಪ್ರದೇಶಗಳೊಳಗಿನ ಹವೆಯು ಹರಿಯಲಾರಂಭಿಸುತ್ತದೆ. ಈ ತಂಪು ಹವೆಯು ಬೆಚ್ಚಗಿನ ಹವೆಯನ್ನು ಮೇಲಕ್ಕೆ ನೂಕಿ ಅದರ ಸ್ಥಳವನ್ನು ತಾನು ವ್ಯಾಪಿಸುತ್ತದೆ. ತುಸು ವೇಳೆಯಲ್ಲಿ ವಿರಲ ಹವೆಯ ಸ್ಥಳವನ್ನೆಲ್ಲ ದಟ್ಟಾದ ತಂಪು ಹವೆಯು ತುಂಬಿ ಬಿಡುವದರಿಂದ ಅಲ್ಲಿ ಹೆಚ್ಚು ಒತ್ತಡದ ಪ್ರದೇಶವು ಉಂಟಾಗುವದು. ಆದ್ದರಿಂದ ಅಲ್ಲಿ ಬೀಸುವ ಗಾಳಿಗಳ ಕಸುವು ಕಡಿಮೆಯಾಗುತ್ತ ಹೋಗಿ ಕಟ್ಟಕಡೆಗೆ ಗಾಳಿ ಬೀಸುವದು ಬಂದಾಗುತ್ತದೆ.

ನಿಮ್ಮ ಊರು ಸಮುದ್ರದ ಹತ್ತರ ಇದ್ದರೆ ಗಾಳಿಗಳ ದಿಕ್ಕು ಹೇಗೆ ಬದಲಾಗುತ್ತದೆಂಬದನ್ನು ನೀವು ಸುಲಭವಾಗಿ ಕಂಡುಕೊಳ್ಳುವಿರಿ. ಸಮುದ್ರ ದಂಡೆಯ ಮೇಲೆ ಪ್ರತಿದಿವಸ ಸಮುದ್ರದ ಗಾಳಿಗಳೂ, ಭೂ–ಗಾಳಿಗಳೂ



ಆಕೃತಿ ೬ ಸಮುದ್ರ–ಗಾಳಿಗಳು

ಬೀಸುತ್ತಿರುತ್ತವೆ. ಸಮುದ್ರದ ಮೇಲಿಂದ ಭೂಮಿಯ ಕಡೆಗೆ ಬೀಸುವ ಗಾಳಿಗಳಿಗೆ ಸಮುದ್ರ–ಗಾಳಿಗಳೆನ್ನುತ್ತಾರೆ (ಆ.೬). ಭೂಮಿಯಿಂದ ಸಮುದ್ರದ ಕಡೆಗೆ

ಬೀಸುವ ಗಾಳಿಗಳಿಗೆ ಭೂ-ಗಾಳಿಗಳೆಂದೆನ್ನುತ್ತಾರೆ (ಆ.೭). ಭೂಮಿಯು ನೀರಿಗಿಂತ ಬೇಗ ಕಾದು ಬೇಗ ಆರುತ್ತದೆ. ಹಗಲಿನಲ್ಲಿ ಭೂಮಿಯು ತೀವ್ರವೇ ಕಾಯುತ್ತದೆ. ಆದ್ದರಿಂದ ಅದಕ್ಕೆ ಹೊಂದಿಕೊಂಡಿದ್ದ ಹವೆಯಾದರೂ ಕಾದು ವಿರಲವಾಗುತ್ತದೆ. ಮತ್ತು ಅಲ್ಲಿ ಕಡಿಮೆ ಒತ್ತಡದ ಪ್ರದೇಶವು ನಿರ್ಮಾಣ



ಆಕೃತಿ ೭ ಭೂ-ಗಾಳಿಗಳು

ವಾಗುತ್ತದೆ. ಸಮುದ್ರದ ಮೇಲಿನ ತಂಪು ಹವೆಯು ಭೂಮಿಯ ಕಡೆಗೆ ಬೀಸಲಾರಂಭಿಸುತ್ತದೆ. ಇದೇ **ಸಮುದ್ರ-ಗಾಳಿಯು**. ಇದರ ವಿರುದ್ಧವಾಗಿ ಇರುಳಿನಲ್ಲಿ ನೆಲವು ತೀವ್ರವಾಗಿ ತಂಪಾಗುತ್ತದೆ. ಆದರೆ ನೀರು ಮಾತ್ರ ಇನ್ನೂ ಬೆಚ್ಚಗೆ ಇರುತ್ತದೆ. ಆದ್ದರಿಂದ ಸಮುದ್ರದ ಮೇಲಿನ ಹವೆಯು ಬೆಚ್ಚಗಾಗಿಯೂ, ವಿರಲವಾಗಿಯೂ ಆಗುತ್ತದೆ. ಮತ್ತು ಅಲ್ಲಿ ಕಡಿಮೆ ಒತ್ತುವಿಕೆಯ ಸ್ಥಳವು ನಿರ್ಮಾಣವಾಗುತ್ತದೆ. ಈಗ ಭೂಮಿಯ ಮೇಲಿನ ಹೆಚ್ಚು ಒತ್ತಡದ ಹವೆಯು ಸಮುದ್ರದ ಕಡೆಗೆ ಬೀಸಲಾರಂಭಿಸುತ್ತದೆ. ಇವೇ **ಭೂ-ಗಾಳಿಗಳು.**

ಹವಾಮಾನದ ಬಗ್ಗೆ ವಿಚಾರಮಾಡುವಾಗ ಮೂರನೇ ಮಹತ್ವವಾದ ಸಂಗತಿ ಎಂದರೆ, ಹವೆಯೊಳಗೆ ಯಾವಾಗಲೂ ಇರುವ ನೀರಿನ ಉಗಿಯ ಪ್ರಮಾಣವು. ವಾತಾವರಣದೊಳಗೆ ಯಾವಾಗಲೂ ನೀರಿನ ಉಗಿಯು ಇದ್ದೇ ಇರುತ್ತದೆ. ಸಂಪೂರ್ಣವಾದ ಒಣ ಹವೆಯು ಎಂದಿಗೂ ಇರಲಾರದು. ಆದರೆ ಉಗಿಯ ಪ್ರಮಾಣವು ಮಾತ್ರ ಹೆಚ್ಚು ಕಡಿಮೆಯಾಗಬಹುದು. ಉಗಿಯ ಪ್ರಮಾಣವು ಕಡಿಮೆಯಾಗಿದ್ದರೆ ನಾವು ಒಣ ಹವೆ ಎಂದೆನ್ನುತ್ತೇವೆ. ಉಗಿಯ ಪ್ರಮಾಣವು ಹೆಚ್ಚಾಗಿದ್ದರೆ ಆ ಹವೆಗೆ ನಾವು ಕುಂದ(ಆರ್ದ್ರ) ಹವೆ ಎಂದೆನ್ನು

ತ್ತೇವೆ. ನೀರು ಕಾದು ಉಗಿಯಾಗಿ ಅದು ಹವೆಯೊಳಗೆ ಹೋಗುತ್ತದೆ. ಆದ್ದರಿಂದ ಸಮುದ್ರದ ಮೇಲಿರುವ ಹವೆಯಲ್ಲಿ ನೀರಿನ ಆರ್ದ್ರತೆಯು ಭೂಮಿಯ ಮೇಲಿರುವ ಹವೆಗಿಂತ ಹೆಚ್ಚಾಗಿರುತ್ತದೆಂಬದು ಸ್ಪಷ್ಟವಾಗಿರುತ್ತದೆ. ನೀರಿನ ಉಗಿಯು ಹವೆಗಿಂತ ಹಗುರಾಗಿರುವದರಿಂದ ಅದು ಹವೆಯಲ್ಲಿ ತೇಲಾಡುತ್ತದೆ. ದಟ್ಟ ಹವೆಗಿಂತ ವಿರಲ ಹವೆಯೊಳಗೆ ಹೆಚ್ಚು ಉಗಿಯು ಹಿಡಿಸುತ್ತದೆ.

ಹವೆಯು ಒಣದಾಗಿದೆಯೋ ಅಥವಾ ಆರ್ದ್ರವಾಗಿದೆಯೋ ಎಂಬದನ್ನು ತಿಳಿದುಕೊಳ್ಳಲಿಕ್ಕೆ ಸುಲಭವಾದ ಒಂದು ರೀತಿ ಇರುತ್ತದೆ. ಹಸಿಯಾದ ಅರಿವೆಯು ತೀವ್ರವಾಗಿ ಒಣಗಿದರೆ ಹವೆಯು ಒಣದಾಗಿದೆ ಎಂದು ತಿಳಿಯಬೇಕು. ಅದೇ ಅರಿವೆಯು ತೀವ್ರವಾಗಿ ಒಣಗದೇ ಇದ್ದರೆ ಹವೆಯೊಳಗೆ ಆರ್ದ್ರತೆಯು ಹೆಚ್ಚಾಗಿರುವದರಿಂದ ಅದು ಕುಂದ (ಆರ್ದ್ರ) ಹವೆ ಎಂದು ತಿಳಿಯಬೇಕು. ಬೇಸಿಗೆಯಲ್ಲಿ ಅರಿವೆಗಳು ತೀವ್ರವಾಗಿ ಒಣಗುವವು. ಆದರೆ ಮಳೆಗಾಲದಲ್ಲಿ ತೀವ್ರ ಒಣಗುವದಿಲ್ಲ. ಯಾಕಂದರೆ ಆಗ ಹವೆಯು ಕುಂದಾಗಿರುತ್ತದೆ. ಯಾವದಾದರೊಂದು ಊರು ಸಮುದ್ರದಂಡೆಯ ಮೇಲಿದ್ದರೆ ಅಲ್ಲಿಯ ಹವೆಯು ಕುಂದಾಗಿರುತ್ತದೆ. ಸಮುದ್ರದಿಂದ ದೂರದಲ್ಲಿರುವ ಊರುಗಳ ಹವೆಯು ಒಣದಾಗಿರುತ್ತದೆ. ಮುಂಬಯಿ, ಕಾರವಾರ ಅಥವಾ ಕೊಂಕಣಪಟ್ಟಿಯಲ್ಲಿ ನಮ್ಮ ಮೈಯೊಳಗಿಂದ ಯಾವಾಗಲೂ ಬೆವರು ಸುರಿಯುತ್ತಿರುತ್ತದೆ. ಆದರೆ ಘಟ್ಟದ ಮೇಲಿರುವ ದೇಶದಲ್ಲಿ ಬೆವರು ಕಡಿಮೆಯಾಗಿರುತ್ತದೆ. ದೇಶದೊಳಗೆ (ಘಟ್ಟದ ಮೇಲಿನ ಪ್ರದೇಶ) ಮೈಮೇಲಿನ ಬೆವರ ಹನಿಗಳು ತೀವ್ರವೇ ಉಗಿಯಾಗಿ ಹೋಗುತ್ತವೆ; ಯಾಕಂದರೆ ಇಲ್ಲಿಯ ಹವೆಯು ಒಣದಾಗಿರುತ್ತದೆ. ಕೊಂಕಣಪಟ್ಟಿಯಲ್ಲಿ ಸಮುದ್ರವು ಸಮೀಪವಿರುವದರಿಂದ ಹವೆಯೊಳಗೆ ಉಗಿಯ ಪ್ರಮಾಣವು ಹೆಚ್ಚಾಗಿರುತ್ತದೆ. ಅಂದರೆ ಅಲ್ಲಿಯ ಹವೆಯು ಕುಂದಾಗಿರುತ್ತದೆ. ಆದ್ದರಿಂದ ಅಲ್ಲಿ ಮೈಮೇಲಿನ ಬೆವರ ಹನಿಗಳು ತೀವ್ರವಾಗಿ ಆರುವದಿಲ್ಲ. ಬೆವರು ಆರಬೇಕಾದರೆ ನಾವು ಗಾಳಿಗೆ ಮೈ ಒಡ್ಡುತ್ತೇವೆ. ಗಾಳಿಗಳು ಇಲ್ಲದಿದ್ದರೆ ಬೀಸಣಿಕೆಯಿಂದ ಬೀಸಿಕೊಳ್ಳಬೇಕಾಗುತ್ತದೆ.

ಯಾವದೇ ಸ್ಥಳದ ಹವಾಮಾನದ ಬಗ್ಗೆ ನಮಗೆ ತಿಳಿದುಕೊಳ್ಳಬೇಕಾದರೆ ಕೆಳಗಿನ ಮೂರು ಸಂಗತಿಗಳು ಗೊತ್ತಾಗಬೇಕು. (೧) ಸೂರ್ಯನಿಂದ ಬರುವ ಉಷ್ಣತೆ. (೨) ಹವೆಯ ಒತ್ತಡ. (೩) ಮತ್ತು ಹವೆಯಲ್ಲಿರತಕ್ಕ ಆರ್ದ್ರತೆಯ ಪ್ರಮಾಣ. ಈ ಮೂರು ಸಂಗತಿಗಳು ಗೊತ್ತಾದರೆ ಅಲ್ಲಿಯ

ಹವೆಯ ಬಗ್ಗೆ ಸರಿಯಾದ ಕಲ್ಪನೆ ಬರುತ್ತದೆ. ಆದ್ದರಿಂದಲೇ ಆ ಸ್ಥಳದ ಪೃಥ್ವಿಯ ಗೋಲದ ಮೇಲಿನ ಸ್ಥಾನ, ಸಮುದ್ರ ಸಪಾಟಿಯಿಂದ ಇರುವ ಅದರ ಎತ್ತರ, ಮತ್ತು ಸಮುದ್ರ ಸಾಮೀಪ್ಯ ಈ ಮೂರು ಸಂಗತಿಗಳ ಬಗ್ಗೆ ವಿಚಾರ ಮಾಡಬೇಕಾಗುವದು.

## ಪ್ರಶ್ನೆಗಳು

೧. ಹವಾಮಾನವನ್ನು ತಿಳಿದುಕೊಳ್ಳಲಿಕ್ಕೆ ಯಾವ ಸಂಗತಿಗಳು ಗೊತ್ತಾಗಬೇಕು?

೨. ಸೂರ್ಯನಿಂದ ಪೃಥ್ವಿಯ ಬೇರೆ ಬೇರೆ ಭಾಗಗಳಿಗೆ ಹೆಚ್ಚು ಕಡಿಮೆ ಪ್ರಮಾಣದಿಂದ ಉಷ್ಣತೆಯು ಯಾಕೆ ಸಿಗುತ್ತದೆ? ಆಕೃತಿ ಸಹಿತ ವಿವರಿಸಿರಿ.

೩. ಸಮುದ್ರ-ಗಾಳಿ, ಭೂ-ಗಾಳಿಗಳೆಂದರೇನು? ಅವು ಎಲ್ಲಿ ಮತ್ತು ಹೇಗೆ ಬೀಸುತ್ತವೆ?

೪. ಒಣ ಹವೆ, ಕುಂದ ಹವೆ ಎಂದರೇನು? ಅವುಗಳನ್ನು ತಿಳಿದುಕೊಳ್ಳುವ ಸುಲಭವಾದ ಉಪಾಯವು ಯಾವದು?

೫. ಕೆಳಗೆ ಕೊಟ್ಟವುಗಳಿಗೆ ಕಾರಣ ಕೊಡಿರಿ.

ಅ) ಸಮುದ್ರ ದಂಡೆಯ ಮೇಲಿನ ಪ್ರದೇಶಗಳಲ್ಲಿ ಬೆವರು ಬಹಳ ಬರುತ್ತದೆ.

ಬ) ಬಿಸಿಲುಗಾಲದಲ್ಲಿ ಜನರು ಮಹಾಬಳೇಶ್ವರಕ್ಕೆ ಹೋಗುತ್ತಾರೆ.

ಕ) ವಿಷುವವೃತ್ತದ ಮೇಲೆ ಬಹಳ ಬಿಸಿಲು ಇರುತ್ತದೆ.

೬. ವಿರಲ ಹವೆ ಮತ್ತು ದಟ್ಟ ಹವೆಯಂದರೇನು? ಈ ಪ್ರಕಾರದ ಹವೆಯು ಯಾವ ಸ್ಥಳಗಳಲ್ಲಿ ಕಂಡುಬರುತ್ತದೆ?

ಪಾಠ ೫

## ಋತುಮಾನದ ಗಾಳಿಗಳು (ಮನ್ಸೂನ ಗಾಳಿಗಳು)

ಸುಣ್ಣವ ಕೊಡುವೆನು ಸುರಿಯಲೆ ಮಳೆಯೇ।
ಬಣ್ಣವ ಕೊಡುವೆನು ಬಾರೆಲೊ ಮಳೆಯೇ॥

ಅಂಗಳಿನಲ್ಲಿ ಹುಡುಗರು ಆಡುತ್ತಿರುವಾಗ ಮೇಲಿನ ಹಾಡನ್ನು ಹಾಡುತ್ತಿದ್ದರು. ಅಷ್ಟರಲ್ಲಿ ಒಮ್ಮಿಂದೊಮ್ಮೆ ಗಾಳಿಯು ಬಿಟ್ಟಿತು. ಮುಗಿಲಿನಲ್ಲಿ ಕರೇ ಮೋಡಗಳು ಬರಲಾರಂಭಿಸಿದವು, ಮತ್ತು ತುಸು ವೇಳೆಯಲ್ಲಿಯೇ ಮುತ್ತಿನಂಥ ದೊಡ್ಡ ದೊಡ್ಡ ಮಳೆ ಹನಿಗಳು ಬೀಳಲಾರಂಭಿಸಿದವು. ಹುಡುಗರು ಮೇಲಿನ ಹಾಡನ್ನು ಹಾಡುತ್ತ ಆನಂದದಿಂದ ಕುಣಿಯಲಾರಂಭಿ

ಸಿದರು. ತೀವ್ರವೇ ಗುಡುಗು-ಮಿಂಚುಗಳು ಹುಟ್ಟಿ ಮಳೆಯು ಭರದಿಂದ ಬೀಳತೊಡಗಿತು. ಕೂಡಲೇ ಹುಡುಗರು ಮನೆಯೊಳಗೆ ಹೋಗಿ ಅಲ್ಲಿಂದಲೇ ಮಳೆಯ ಮೋಜನ್ನು ನೋಡಹತ್ತಿದರು. ಮೇ ತಿಂಗಳಿನ ಬಿಡುವಿನಲ್ಲಿ ನಾವು ಪ್ರತಿದಿವಸ ಹೊರಗೆ ಆಡುತ್ತಿದ್ದೆವು. ಅದರೆ ಈವತ್ತಿನ ದಿವಸ ಒಮ್ಮೆಲೇ ಈ ಮಳೆಯು ಹೇಗೆ ಬಂದಿತು ಮತ್ತು ಎಲ್ಲಿಂದ ಬಂದಿತು ಎಂಬದು ಆ ಹುಡುಗರಿಗೆ ತಿಳಿಯದಾಯಿತು. ಅಷ್ಟರಲ್ಲಿ ಅಜ್ಜನು ಹೊರಗಿನಿಂದ ಬಂದನು. ಕೂಡಲೇ ಹುಡುಗರೆಲ್ಲರೂ ಅಜ್ಜನ ಸುತ್ತಲೂ ಕುಳಿತು ತಮ್ಮ ಸಂಶಯವನ್ನು ಅವನಿಗೆ ಹೇಳಿದರು.

ಅಜ್ಜ:— "ಹವೆಯೊಳಗಿರುವ ನೀರಿನ ಉಗಿಗೆ ತಂಪು ತಗಲಿತೆಂದರೆ ಅದು ನೀರಾಗಿ ಮಳೆಯ ರೂಪದಿಂದ ಭೂಮಿಯ ಮೇಲೆ ಬೀಳುತ್ತದೆ."

"ಅಜ್ಜನೇ, ಹವೆಯೊಳಗೆ ಇಷ್ಟು ಉಗಿಯು ಎಲ್ಲಿಂದ ಬಂತು?"

"ಬಿಸಿಲಿನಿಂದ ನೀರು ಕಾಯುತ್ತದೆ. ಮತ್ತು ಅದು ಉಗಿಯಾಗುತ್ತದೆ. ಉಗಿಯು ಹವೆಗಿಂತ ಹಗುರಾಗಿರುವದರಿಂದ ಅದು ವಾತಾವರಣದೊಳಗೆ ತೇಲಾಡುತ್ತದೆ. ಈ ಪ್ರಕಾರವಾಗಿ ಆಕಾಶದೊಳಗೆ ಉಗಿಯು ಒಟ್ಟುಗೂಡಿ ಮೋಡಗಳಾಗುತ್ತವೆ."

"ಅಜ್ಜನೇ, ಆದರೆ ನಮ್ಮ ಊರಿನ ಸುತ್ತುಮುತ್ತಲೂ ಕೇವಲ ಬೈಲು ಪ್ರದೇಶವಿದ್ದು ಅಲ್ಲಿ ನೀರು ಹೆಚ್ಚಾಗಿರುವದಿಲ್ಲ. ಅಂದ ಮೇಲೆ ಈ ಉಗಿಯು ಇಲ್ಲಿ ಎಲ್ಲಿಂದ ಬಂತು?"

"ಸರಿಯಾದ ಪ್ರಶ್ನೆಯನ್ನು ಕೇಳಿದಿರಿ. ಮಳೆಯಾಗುವ ಸ್ಥಳದಲ್ಲಿಯೇ ಈ ಉಗಿಯು ಒಟ್ಟುಗೂಡುವದಿಲ್ಲ. ದೂರದಲ್ಲಿ ಕೂಡಿದ ಉಗಿಯು ಗಾಳಿಗಳಿಂದ ಇತ್ತಕಡೆಗೆ ಬರುತ್ತದೆ. ನಮ್ಮ ದೇಶದ ಪಶ್ಚಿಮಕ್ಕೆ ಅರಬೀಸಮುದ್ರವಿರುತ್ತದೆ. ಅದಕ್ಕೆ ಹೊಂದಿಯೇ ದಕ್ಷಿಣಕ್ಕೆ ಹಿಂದೀ ಮಹಾಸಾಗರವಿರುತ್ತದೆ. ಈ ಮಹಾ ಸಾಗರದ ಮೇಲೆ ಸೂರ್ಯನ ಉಷ್ಣತೆಯಿಂದ ನೀರು ಕಾಯುತ್ತದೆ; ಮತ್ತು ಅದರಿಂದ ಉಗಿಯು ಉತ್ಪನ್ನವಾಗುತ್ತದೆ. ಈ ಉಗಿಯು ಗಾಳಿಗಳಿಂದ ನಮ್ಮ ಕಡೆಗೆ ಬರುತ್ತದೆ. ಈ ಗಾಳಿಗಳಿಗೆ **ಋತುಮಾನದ ಗಾಳಿಗಳು** (ಮನ್ಸೂನ) ಎಂದೆನ್ನುತ್ತಾರೆ."

"ಅಜ್ಜನೇ, ಇವುಗಳಿಗೆ ಈ ಹೆಸರು ಏಕೆ ಬಂದಿತು?"

"ಈ ಗಾಳಿಗಳು ಇಡೀ ವರುಷದಲ್ಲೆಲ್ಲ ಬೀಸುವದಿಲ್ಲ. ಅವು ಕೆಲವೊಂದು

ಋತುವಿನಲ್ಲಿಯೇ ಬೀಸುವದರಿಂದ ಅವುಗಳಿಗೆ ಈ ಹೆಸರು ಬಂದಿರುತ್ತದೆ. ಈ ಗಾಳಿಗಳು ಮೇ ತಿಂಗಳಿನಿಂದ ಅಕ್ಟೋಬರ ತಿಂಗಳಿನ ವರೆಗೆ ಮಾತ್ರ ಬೀಸುತ್ತವೆ. ಆ ಮೇಲೆ ಬಂದಾಗುತ್ತವೆ."

"ಆದರೆ ಈ ಗಾಳಿಗಳು ನಮ್ಮ ಕಡೆಗೆ ಬರುವ ಕಾರಣವೇನು? "




ಆಕೃತಿ ೮ ನೀರಿನ ಉಗಿಯೂ ಮತ್ತು ಅದರಿಂದುಂಟಾಗುವ ಮಳೆಯೂ

"ಹವೆಯು ಕಾದು ವಿರಲವಾಯಿತೆಂದರೆ ಅಲ್ಲಿ ಕಡಿಮೆ ಒತ್ತಡದ ಪ್ರದೇಶವು ಉಂಟಾಗುತ್ತದೆಂಬುದನ್ನು ನೀವು ಬಲ್ಲಿರಿ. ಆದ್ದರಿಂದ ಅಲ್ಲಿ ಹೆಚ್ಚು ಒತ್ತಡದ ಸ್ಥಳಗಳಿಂದ ಗಾಳಿಗಳು ಬೀಸಲಾರಂಭಿಸುವವು. ಹಿಂದುಸ್ಥಾನದ ಉತ್ತರ ದಿಕ್ಕಿನಲ್ಲಿ ಮಧ್ಯ ಏಶಿಯಾದೊಳಗೆ ಉಸುಬಿನ ಅರಣ್ಯವಿರುವದು. ಅಲ್ಲಿ ಮಾರ್ಚ ತಿಂಗಳಿನಿಂದ ಪ್ರಖರವಾದ ಬೇಸಿಗೆಯು ಇರುತ್ತದೆ. ಆದ್ದರಿಂದ ಅಲ್ಲಿ ಕಡಿಮೆ ಒತ್ತಡದ ಪ್ರದೇಶವು ನಿರ್ಮಾಣವಾಗುತ್ತದೆ. ಈ ಪ್ರದೇಶವನ್ನು ತುಂಬಿಕೊಳ್ಳಲಿಕ್ಕೆ ಈ ಮನ್ಸೂನ ಗಾಳಿಗಳು ನೈಋತ್ಯದಿಂದ ಬೀಸುತ್ತವೆ."

"ಅಂದರೆ ಸಮುದ್ರ ದಂಡೆಯ ಮೇಲೆ ಬೀಸುವ ಸಮುದ್ರ, ಭೂ-ಗಾಳಿಗಳಂತೆಯೇ ಈ ಗಾಳಿಗಳಾದರೂ ಇರುತ್ತವೆಂದೆನ್ನಬಹುದು."

"ಹೌದು. ಮನ್ಸೂನ ಗಾಳಿಗಳೆಂದರೆ ದೊಡ್ಡ ಪ್ರಮಾಣದಿಂದ ಬೀಸುವ ಸಮುದ್ರ-ಗಾಳಿಗಳೇ ಆಗಿರುತ್ತವೆ. ಈ ಗಾಳಿಗಳು ಸಾವಿರಾರು ಮೈಲು ವಿಸ್ತಾರವಾದ ಸಮುದ್ರಗಳ ಮೇಲಿಂದ ಹಾದುಬರುತ್ತವೆ. ಆದ್ದರಿಂದ ಇವು ತಮ್ಮ ಸಂಗಡ ಉಗಿಯ ಮೋಡಗಳನ್ನು ಸಹ ತರುತ್ತವೆ. ಈ ಗಾಳಿಗಳು ನೆಲದ ಮೇಲೆ ಬೀಸುವಾಗ ದಾರಿಯಲ್ಲಿ ಎತ್ತರವಾದ ಗುಡ್ಡ-ಪರ್ವತಗಳಿಂದ ತಡೆಯಲ್ಪಡುತ್ತವೆ. ಆಗ ಈ ಗಾಳಿಗಳು ಮೇಲಕ್ಕೆ ಏರಲಾರಂಭಿಸುತ್ತವೆ. ಮೇಲಿರುವ ತಂಪು ಹವೆಯಲ್ಲಿ ಸೇರಲು, ಅಲ್ಲಿರುವ ತಂಪು ಮೋಡಗಳಿಗೆ ತಗಲಲು ಅವು ನೀರಾಗಿ ನಮಗೆ ಮಳೆಯನ್ನು ಕೊಡುತ್ತವೆ."

"ಅಂದರೆ ಈ ಗಾಳಿಗಳು ನಮ್ಮ ಪಶ್ಚಿಮಕ್ಕೆ ಇರುವ ಸಹ್ಯಾದ್ರಿಗಳಿಂದ ತಡೆಯಲ್ಪಡುತ್ತವೆಂದ ಹಾಗಾಯಿತು."

"ಹೌದು. ಈ ಪರ್ವತಗಳಿಂದಲೇ ಅವು ತಡೆಯಲ್ಪಡುತ್ತವೆ. ಮತ್ತು ಕೊಂಕಣಪಟ್ಟಿಯಲ್ಲಿ ಬಹಳ ಮಳೆಯನ್ನು ಕೊಡುತ್ತವೆ."

"ಅಜ್ಜನೇ, ಆದರೆ ನಮ್ಮಲ್ಲಿ ಮಳೆಯಾಗುತ್ತಿರುವಾಗಲೇ ನಮ್ಮ ಪೂರ್ವಕ್ಕೆ ಇರುವ ಬಂಗಾಲ ಪ್ರಾಂತದಲ್ಲಿಯೂ ಮಳೆಯಾಗುತ್ತದೆ. ಇದರ ಕಾರಣವೇನು?"

"ಶಹಾಬಾಸ! ಅದರ ಕಾರಣವನ್ನು ಹೇಳುತ್ತೇನೆ ಕೇಳಿರಿ. ನೈಋತ್ಯ ದಿಕ್ಕಿನಿಂದ ಮನ್ಸೂನ ಗಾಳಿಗಳು ಬೀಸುತ್ತ ಬರುತ್ತವೆ. ಇವುಗಳ ದಾರಿಯಲ್ಲಿ ಹಿಂದುಸ್ಥಾನದ ದಕ್ಷಿಣದ ತುದಿಯೂ, ಸಿಲೋನ ನಡುಗಡ್ಡೆಯೂ ಬರುತ್ತವೆ. ಆದ್ದರಿಂದ ಈ ಗಾಳಿಗಳು ಇಬ್ಭಾಗಿಸಲ್ಪಡುತ್ತವೆ. ಅದರೊಳಗಿನ ಒಂದು ಭಾಗವು ಅರಬೀ ಸಮುದ್ರದ ಮೇಲಿಂದ ಹಾದು ನಮಗೆ ಮಳೆಯನ್ನು ತರುತ್ತದೆ. ಎರಡನೇ ಭಾಗವು ಬಂಗಾಲದ ಉಪಸಾಗರದ ಮೇಲಿಂದ ಹಾದು ನೆಟ್ಟಗೆ ಬಂಗಾಲ ಪ್ರಾಂತವನ್ನು ಸೇರುತ್ತದೆ. ಬಂಗಾಲದ ಉತ್ತರಕ್ಕೆ ಹಿಮಾಲಯ ಪರ್ವತವಿರುತ್ತದೆ. ಈ ಪರ್ವತವು ಅಡ್ಡಬರುವದರಿಂದ ಗಾಳಿಗಳು ತಡೆಯಲ್ಪಟ್ಟು, ಬಂಗಾಲ ಪ್ರಾಂತದಲ್ಲಿ ಮಳೆಯನ್ನು ಕೊಡುತ್ತವೆ."

"ಅಜ್ಜನೇ, ಹಾಗಾದರೆ ಸಹ್ಯಾದ್ರಿ, ಹಿಮಾಲಯ ಪರ್ವತಗಳು ನಮ್ಮ ಮೇಲೆ ದೊಡ್ಡ ಉಪಕಾರವನ್ನೇ ಮಾಡುತ್ತವೆಂದಂತಾಯಿತು."

"ನಿಜ. ಈ ಪರ್ವತಗಳಿರುವದರಿಂದಲೇ ಬೇರೆ ಬೇರೆ ಪ್ರಾಂತಗಳಿಗೆ ಮಳೆಯು ದೊರೆಯುತ್ತದೆ."

## ಪ್ರಶ್ನೆಗಳು

೧. ಉಗಿಯಿಂದ ಮಳೆಯು ಹೇಗಾಗುತ್ತದೆಂಬುದನ್ನು ವರ್ಣಿಸಿರಿ.
೨. ಋತುಮಾನದ ಗಾಳಿಗಳೆಂದರೇನು? ಅವು ಯಾವಾಗ ಬೀಸುತ್ತವೆ?
೩. ಕೊಂಕಣಪಟ್ಟಿಗೂ, ಬಂಗಾಲ ಪ್ರಾಂತಕ್ಕೂ ಒಂದೇ ವೇಳೆಗೆ ಏಕೆ ಮಳೆ ಯಾಗುತ್ತದೆ?
೪. ಮನ್ಸೂನ ಗಾಳಿಗಳ ಮುಖ್ಯವಾದ ಭಾಗಗಳು ಯಾವವು? ಅವು ಏಕೆ ಉಂಟಾಗುತ್ತವೆ?
೫. ಮನ್ಸೂನ ಗಾಳಿಗಳು ಬೇಸಿಗೆಯಲ್ಲಿಯೇ ಏಕೆ ಬೀಸುತ್ತವೆ? ಕಾರಣ ಕೊಡಿರಿ.

ಪಾಠ ೬

## ಹಿಂದುಸ್ಥಾನ (ಸಾಮಾನ್ಯ ವರ್ಣನೆ)

ಏಶಿಯಾ ಖಂಡದ ದಕ್ಷಿಣಕ್ಕೆ ಮಹಾಸಾಗರದಲ್ಲಿ ಮೂರು ದ್ವೀಪಕಲ್ಪಗಳು ಚಾಚಿರುತ್ತವೆ. ಅವುಗಳೊಳಗಿನ ನಡುವಿನ ದ್ವೀಪಕಲ್ಪವೇ ನಮ್ಮ ಹಿಂದುಸ್ಥಾನ ದೇಶವು. ಇದರ ಆಕಾರವು ತ್ರಿಕೋಣದಂತೆ ಇದ್ದು ಅದು ದಕ್ಷಿಣಕ್ಕೆ ಚೂಪಾಗುತ್ತಾ ಹೋಗಿರುತ್ತದೆ. ಕೆಳಗೆ ಕೊಟ್ಟ ಹಿಂದುಸ್ಥಾನ ದೇಶದ ನಕಾಶೆಯ ಕಡೆಗೆ ನೋಡಿರಿ (ಆ. ೯).

ಈ ನಕಾಶದೊಳಗೆ ಉತ್ತರ ದಿಕ್ಕಿನಲ್ಲಿ ಪರ್ವತಾವಳಿಯ ಒಂದು ಅಖಂಡವಾದ ಗೋಡೆಯೇ ಇರುತ್ತದೆ. ಇದು ವಾಯುವ್ಯದಿಂದ ಆರಂಭವಾಗಿ ನೆಟ್ಟಗೆ ಈಶಾನ್ಯದವರೆಗೆ ಹಬ್ಬಿರುತ್ತದೆ. ಉತ್ತರ ದಿಕ್ಕಿನಲ್ಲಿ ಹಿಮಾಲಯ ಪರ್ವತವಿರುತ್ತದೆ. ಇದರಷ್ಟು ಎತ್ತರವಾದ ಪರ್ವತವು ಜಗತ್ತಿನೊಳಗೆ ಇನ್ನೊಂದು ಇರುವದಿಲ್ಲ. ಈ ಹಿಮಾಲಯ ಪರ್ವತದಿಂದ ನಮ್ಮ ದೇಶಕ್ಕೆ ಎಷ್ಟೋ ಉಪಕಾರಗಳಾಗಿರುತ್ತವೆ. ಉತ್ತರದ ಕಡೆಯಿಂದ ಶತ್ರುಗಳು ಏರಿ ಬರಲಾರರು. ಅದರಂತೆ ಮಧ್ಯ ಏಶಿಯದಲ್ಲಿ ಬೀಸುವ ಚಳಿಗಾಳಿಗಳು ನಮ್ಮ ದೇಶದಲ್ಲಿ ಬೀಸಲಾರವು. ಸಿಂಧೂ, ಗಂಗಾ, ಯಮುನಾ, ಬ್ರಹ್ಮಪುತ್ರಾ ಮುಂತಾದ ಹೊಳೆಗಳೆಂದರೆ ಹಿಮಾಲಯದ ಮಕ್ಕಳೇ. ಈ ಹೊಳೆಗಳಿಂದ ಹಿಂದುಸ್ಥಾನ ದೇಶಕ್ಕೆ ಹೇಳಕೂಡದಷ್ಟು ಉಪಕಾರಗಳಾಗಿರುತ್ತವೆ. ಇದಲ್ಲದೆ ನೈಋತ್ಯದಿಂದ ಹಿಂದೀ ಮಹಾಸಾಗರದ ಮೇಲಿಂದ ಹಾದು ಬರುವ ಮನ್ಸೂನ

ಗಾಳಿಗಳು ಹಿಮಾಲಯದಿಂದ ತಡೆಯಲ್ಪಡುವದರಿಂದ ಇಡೀ ಹಿಂದುಸ್ಥಾನಕ್ಕೆ ಸಾಕಷ್ಟು ಮಳೆಯಾಗುತ್ತದೆ.

ಈ ಪರ್ವತದ ಅಡಿಯಲ್ಲಿ ಸಿಂಧೂ, ಗಂಗಾ, ಬ್ರಹ್ಮಪುತ್ರಾ ನದಿಗಳಿಂದ ತರಲ್ಪಟ್ಟ ರೇವೆಯಿಂದುಂಟಾದ ವಿಸ್ತಾರವಾದ ಬೈಲು ಇರುತ್ತದೆ. ಈ ಬೈಲು




ಆಕೃತಿ ೯ ಹಿಂದುಸ್ಥಾನ–ಸ್ವಾಭಾವಿಕ ವಿಭಾಗಗಳು

ಸಿಂಧೂ ನದಿಯ ಮುಖದಿಂದ ನೆಟ್ಟಗೆ ಗಂಗಾ ಮತ್ತು ಬ್ರಹ್ಮಪುತ್ರಾ ಹೊಳೆಗಳ ಮುಖದವರೆಗೆ ಹಬ್ಬಿರುತ್ತದೆ. ಇದು ಸಮುದ್ರ ಸಪಾಟಿಯಿಂದ ಕ್ರಮೇಣವಾಗಿ ಎತ್ತರವಾಗುತ್ತ ಹೋಗಿರುತ್ತದೆ. ದಿಲ್ಲೀ ಪ್ರಾಂತದ ಹತ್ತರ ಈ ಬೈಲಿನ ಅತಿ ಹೆಚ್ಚಾದ ಎತ್ತರವೆಂದರೆ ೮೦೦ ಫೂಟು ಮಾತ್ರ ಇರುತ್ತದೆ. ಪ್ರಾಚೀನ ಕಾಲದಲ್ಲಿ ಆರ್ಯರು ಹಿಂದುಸ್ಥಾನದಲ್ಲಿ ಮೊಟ್ಟಮೊದಲು ಈ ಬೈಲಿನಲ್ಲಿಯೇ ಬಂದು ನೆಲಿಸಿದರು. ಈ ಬೈಲು ಅತಿ ಫಲವತ್ತಾಗಿರುವದರಿಂದ ಅಲ್ಲಿ ಜನವಸತಿಯಾದರೂ ಬಹಳ ದಟ್ಟಾಗಿರುತ್ತದೆ.

ಈ ಕೊಳ್ಳದೊಳಗಿಂದ ನಾವು ದಕ್ಷಿಣಕ್ಕೆ ಬರಹತ್ತಿದರೆ ಮೊಟ್ಟಮೊದಲು ನಮಗೆ ಮಾಳವಾದ ತಪ್ಪಲು ಹತ್ತುವದು. ಈ ತಪ್ಪಲಿನ ಅಂಚಿನಲ್ಲಿ ವಿಂಧ್ಯ ವೆಂಬ ಪರ್ವತವು ಪೂರ್ವ-ಪಶ್ಚಿಮವಾಗಿ ಹಬ್ಬಿರುತ್ತದೆ. ವಿಂಧ್ಯ ಪರ್ವತದ ದಕ್ಷಿಣಕ್ಕೆ ಸಾತಪುಡಾ ಗುಡ್ಡಗಳಿರುತ್ತವೆ. ಮತ್ತು ಇವೆರಡರ ನಡುವೆ ನರ್ಮದಾ ಹೊಳೆಯ ಕೊಳ್ಳವಿರುತ್ತದೆ. ಸಾತಪುಡಾದ ದಕ್ಷಿಣಕ್ಕೆ ಇರುವ ತಾಪೀ ಹೊಳೆಯ ಕೊಳ್ಳವನ್ನು ದಾಟಿದ ಕೂಡಲೇ ನಾವು ಡೆಕ್ಕನ್ನದ(ದಕ್ಷಿಣದ) ತಪ್ಪಲಿನ ಮೇಲೆ ಬರುತ್ತೇವೆ. ಈ ತಪ್ಪಲು ಪೂರ್ವದ ಕಡೆಗೆ ಇಳಿಜಾರಾ ಗಿರುತ್ತದೆ. ಈ ತಪ್ಪಲಿನ ಪಶ್ಚಿಮದ ಅಂಚಿನಲ್ಲಿ ಸಹ್ಯಾದ್ರಿಯ ಸಾಲು ಇರುತ್ತದೆ. ಪೂರ್ವದ ಅಂಚಿಗೆ ಪೂರ್ವಘಟ್ಟವೆಂದೆನ್ನುತ್ತಾರೆ. ಮತ್ತು ದಕ್ಷಿಣದ ಅಂಚಿನ ಮೇಲೆ ನೀಲಗಿರಿ ಎಂಬ ಪರ್ವತವಿರುತ್ತದೆ. ಡೆಕ್ಕನ್ನದ ತಪ್ಪಲಿಗೂ ಮತ್ತು ಸಮುದ್ರಕ್ಕೂ ನಡುವೆ ಕಿರಿಯಗಲಾದ ಪಟ್ಟಿ ಇರುತ್ತದೆ.

ಹಿಂದುಸ್ಥಾನವು ಆಕಾರದಲ್ಲಿ ಬಹಳ ವಿಸ್ತಾರವಾದ ದೇಶವಿರುತ್ತದೆ. ಅದು ಏಶಿಯಾ ಖಂಡದಲ್ಲಿದ್ದರೂ ಅದು ಖಂಡದಿಂದ ತೀರ ಅಲಿಪ್ತವಾಗಿರು ತ್ತದೆ. ಒಂದು ಕಡೆಗೆ ಎತ್ತರವಾದ ಪರ್ವತಗಳೂ ಉಳಿದ ಕಡೆಗೆಲ್ಲ ಸಮುದ್ರವೂ ಇರುವದರಿಂದ ಈ ದೇಶವು ಸ್ವತಂತ್ರ ಭಾಗವಾಗಿರುತ್ತದೆ. ರಾಜಕೀಯ ದೃಷ್ಟಿಯಿಂದ ಈ ದೇಶದಲ್ಲಿ ಈಗ ಹಿಂದುಸ್ಥಾನ ಮತ್ತು ಪಾಕಿಸ್ತಾನ ಎಂಬ ಎರಡು ಸ್ವತಂತ್ರ ದೇಶಗಳಾಗಿದ್ದರೂ, ಭೌಗೋಲಿಕ ದೃಷ್ಟಿಯಿಂದ ಅದರ ಅವಿಭಾಜ್ಯತ್ವವು ಹೋಗಲಾರದು. ಇದಲ್ಲದೆ ಈ ದೇಶದ ಮೇಲೆ ಬೀಸುವ ಮನ್ಸೂನ ಗಾಳಿಗಳಿಂದ ಅಲ್ಲಿಯ ಹವಾಮಾನವು ಒಂದು ವಿಶಿಷ್ಟ ತರದ್ದಾ ಗಿರುತ್ತದೆ.

ಅಭ್ಯಾಸದ ದೃಷ್ಟಿಯಿಂದ ಸುಲಭವಾಗಬೇಕೆಂದು, ಈ ವಿಶಾಲವಾದ ದೇಶದೊಳಗೆ ಬೇರೆ ಬೇರೆ ಭಾಗಗಳನ್ನು ಮಾಡುವದು ಯೋಗ್ಯವಾಗಿರುತ್ತದೆ. ಮನ್ಸೂನ ಗಾಳಿಗಳಿಂದ ಈ ದೇಶಕ್ಕೆ ಮಳೆಯಾಗುತ್ತಿದ್ದರೂ, ಎಲ್ಲ ಭಾಗಗಳಲ್ಲಿ ಒಂದೇ ಸವನೆ ಮಳೆಯಾಗುವದಿಲ್ಲ. ಈ ದೇಶದೊಳಗೆ ತಗ್ಗುದಿನ್ನೆಗಳಿದ್ದದ ರಿಂದ, ಕೆಲವು ಕಡೆಯಲ್ಲಿ ಹೆಚ್ಚು ಮಳೆಯಾಗುತ್ತದೆ; ಕೆಲವು ಕಡೆಯಲ್ಲಿ ಸಾಧಾರಣ ಮಳೆಯಾಗುತ್ತದೆ; ಇನ್ನೂ ಕೆಲವು ಕಡೆಯಲ್ಲಿ ತೀರ ಕಡಿಮೆ ಮಳೆಯಾಗುತ್ತದೆ. ಈ ಕಾರಣದಿಂದ ಆಯಾ ಪ್ರದೇಶದೊಳಗಿನ ಬೆಳೆಗಳೂ ಮತ್ತು ಜನಜೀವನವೂ ಬೇರೆ ಬೇರೆಯಾಗಿರುತ್ತವೆ. ಆದ್ದರಿಂದ ಮಳೆಯ

ಪ್ರಮಾಣದ ಮೇಲಿಂದ ಭಾಗಗಳನ್ನು ಮಾಡುವದು ಸುಲಭವಾಗಿರುತ್ತದೆ. ಇಂಥ ಭಾಗಗಳನ್ನೇ ಆಕೃತಿ ೧೦ರಲ್ಲಿ ತೋರಿಸಿರುತ್ತದೆ.




ಆಕೃತಿ ೧೦ ಹಿಂದುಸ್ಥಾನದ ಸ್ವಾಭಾವಿಕ ವಿಭಾಗಗಳು

ಮೇ ತಿಂಗಳಿನ ಕೊನೆಯಿಂದ ಮನ್ಸೂನ ಗಾಳಿಗಳು ಬೀಸಲಿಕ್ಕೆ ಆರಂಭಿಸುತ್ತವೆ. ಹಿಂದುಸ್ಥಾನದ ದಕ್ಷಿಣ ತುದಿಯಲ್ಲಿ ಇದರ ಎರಡು ಟಿಸಿಲು

ಗಳು ಆಗುತ್ತವೆ. ಒಂದು ಟಿಸಿಲು ಅರಬೀ ಸಮುದ್ರದ ಮೇಲಿನಿಂದ ನೈಋತ್ಯ ದಿಂದ ಬರುತ್ತದೆ. ಮತ್ತು ಎರಡನೇ ಟಿಸಿಲು ಬಂಗಾಲದ ಉಪಸಾಗರದ ಮೇಲಿನಿಂದ ಹಾದು ನೆಟ್ಟಗೆ ಬಂಗಾಲ ಪ್ರಾಂತ್ರದ ಮೇಲೆ ಬೀಸುತ್ತದೆ. ಈ ಸಂಗತಿಗಳನ್ನು ನೀವು ಈ ಮೊದಲೇ ತಿಳಿದುಕೊಂಡಿರುತ್ತೀರಿ. ಅರಬೀ




ಆಕೃತಿ ೧೧ ನೈಋತ್ಯ ಮನ್ಸೂನ ಗಾಳಿಗಳು

ಸಮುದ್ರದ ಮೇಲಿಂದ ಬರುವ ಗಾಳಿಗಳಿಂದ ತರಲ್ಪಟ್ಟ ಮೋಡಗಳು ಸಹ್ಯಾದ್ರಿಯಿಂದ ತಡೆಯಲ್ಪಡುತ್ತವೆ. ಆದ್ದರಿಂದ ಕೊಂಕಣ ಪಟ್ಟಿಯಲ್ಲಿ ಸಾಕಷ್ಟು ಮಳೆ ಬೀಳುತ್ತದೆ. ಕೆಲವು ಮೋಡಗಳು ಸಹ್ಯಾದ್ರಿಯನ್ನು ದಾಟಿ ಆಚೆಯ ಕಡೆಗೆ ಹೋಗುತ್ತವೆ. ಆದ್ದರಿಂದ ದೇಶದ (ತಪ್ಪಲಿನ) ಮೇಲೆ ಆಗುವ ಮಳೆಯು ಕಡಿಮೆಯಾಗಿರುತ್ತದೆ. ತುಸು ಗಾಳಿಗಳು ಸೌರಾಷ್ಟ್ರದ ಮೇಲಿನಿಂದ ಹಾದು

ಖಂಬಾಯತದ ಆಖಾತದ ಮೇಲಿನಿಂದ ನರ್ಮದಾ ತಾಪೀ ಹೊಳೆಗಳ ಕೊಳ್ಳದೊಳಗೆ ಹೋಗುತ್ತವೆ. ಆದ್ದರಿಂದ ಗುಜರಾಥ, ವರ್‍ಹಾಡ, ಮಧ್ಯಪ್ರಾಂತ ಮುಂತಾದ ಭಾಗಗಳಿಗೆ ಮಳೆ ದೊರೆಯುತ್ತದೆ.

ಬಂಗಾಲದ ಉಪಸಾಗರದ ಮೇಲಿಂದ ಬೀಸುವ ಮನ್ಸೂನ ಗಾಳಿಯ




ಆಕೃತಿ ೧೨ ಈಶಾನ್ಯ ಮನ್ಸೂನ ಗಾಳಿಗಳು

ಟೆಸಿಲು ಬಂಗಾಲ ಪ್ರಾಂತದೊಳಗೆ ಬೀಸಿ ಮುಂದೆ ಆಸಾಮ ಪ್ರಾಂತದೊಳಗೆ ಹೋಗಿ ಹಿಮಾಲಯದಿಂದ ತಡೆಯಲ್ಪಡುತ್ತದೆ. ಆದ್ದರಿಂದ ಈ ಗಾಳಿಗಳ ದಿಕ್ಕು ಬದಲಾಗುತ್ತದೆ. ಮತ್ತು ಅವು ಗಂಗೆಯ ಕೊಳ್ಳದಗುಂಟ ವಾಯವ್ಯ ದಿಕ್ಕಿಗೆ ಹೋಗುತ್ತವೆ. ಇದರಿಂದ ಇಡೀ ಗಂಗಾ ನದಿಯ ಕೊಳ್ಳದೊಳಗೆ ಮಳೆ ಬೀಳುತ್ತದೆ. ಆದರೆ ಪೂರ್ವದಿಂದ ಪಶ್ಚಿಮದ ಕಡೆಗೆ ಹೋದ ಹಾಗೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ದಾರಿಯಲ್ಲಿಯೇ

ಆದಕ್ಕೆ ಅರಬೀ ಸಮುದ್ರದ ಮೇಲಿನ ಟಿಸಿಲು ಬಂದು ಕೂಡುತ್ತದೆ. ಆಗ ಅವೆರಡೂ ಕೂಡಿಕೊಂಡು ರಾಜಸ್ಥಾನದ ಕಡೆಗೆ ಬೀಸಲಾರಂಭಿಸುತ್ತವೆ. ಆದರೆ ಇಷ್ಟರಲ್ಲಿ ಇಡೀ ಹಿಂದುಸ್ಥಾನದ ಮೇಲೆಲ್ಲ ಮಳೆಯಾಗಿರುವದರಿಂದ ಹವೆಯಲ್ಲಿ ತಂಪು ಹುಟ್ಟಿರುತ್ತದೆ. ಆದ್ದರಿಂದ ಈ ಗಾಳಿಗಳು ಮುಂದೆ ಹೋಗದೇ ಪಂಜಾಬದಿಂದ ಹಿಂತಿರುಗುತ್ತವೆ. ಈಗ ಈ ಗಾಳಿಗಳಲ್ಲಿ ಮೋಡಗಳಿರುವದಿಲ್ಲ. ಬಂದ ದಾರಿಯಿಂದಲೇ ಅವು ಹಿಂತಿರುಗುವದರಿಂದ ಅವುಗಳಿಗೆ 'ಹಿಂತಿರುಗುವ' ಗಾಳಿಗಳೆಂದೆನ್ನುತ್ತಾರೆ. ಗಂಗಾ ನದಿಯ ಕೊಳ್ಳದ ಗುಂಟ ಬೀಸುತ್ತ ಬಂದು, ಕಟ್ಟಕಡೆಗೆ ಅವು ಬಂಗಾಲದ ಉಪಸಾಗರವನ್ನು ಸೇರುತ್ತವೆ. ಇದೇ ಕಾಲಕ್ಕೆ ಈಶಾನ್ಯ ದಿಕ್ಕಿನಿಂದ ಈಶಾನ್ಯ (ಮನ್ಸೂನ ಗಾಳಿಗಳು)ದ ನಿಯಮಿತ ಗಾಳಿಗಳು ಬೀಸಲಿಕ್ಕೆ ಆರಂಭಿಸುತ್ತವೆ. ಈ ಗಾಳಿಗಳು ಒಣದಾಗಿರುತ್ತವೆ. ಆದರೆ ಹಿಂತಿರುಗುವ ಗಾಳಿಗಳೂ ಈಶಾನ್ಯ ಮನ್ಸೂನ ಗಾಳಿಗಳೂ ಬಂಗಾಲದ ಉಪಸಾಗರದ ಮೇಲಿಂದ ಬೀಸುವಾಗ ಅಲ್ಲಿಯ ಉಗಿಯು ಅವುಗಳಲ್ಲಿ ಬೆರೆತು, ಮೋಡಗಳಾಗುತ್ತವೆ. ಮುಂದೆ ಈ ಗಾಳಿಗಳು ಮದ್ರಾಸ ಇಲಾಖೆಯ ಮೇಲೆ ಬೀಸಲಾರಂಭಿಸಲು, ಪೂರ್ವಘಟ್ಟಕ್ಕೆ ತಡೆದು ಅಲ್ಲಿ ಡಿಸೆಂಬರ ಮತ್ತು ಜಾನೇವರೀ ತಿಂಗಳುಗಳಲ್ಲಿ ಮಳೆಯನ್ನು ತರುತ್ತವೆ. ಈ ರೀತಿಯಿಂದ ಮನ್ಸೂನ ಗಾಳಿಗಳಿಂದ ಇಡೀ ಹಿಂದುಸ್ಥಾನ ದೇಶದಲ್ಲೆಲ್ಲ ಮಳೆಯಾಗುತ್ತದೆ. ಮಳೆಯ ಕಸುವು ಗಾಳಿಯ ಮೇಲೆ ಅವಲಂಬಿಸಿರುತ್ತದೆಂಬ ಮಾತು ಈಗ ನಿಮಗೆ ಚನ್ನಾಗಿ ಮನದಟ್ಟಾಗಿರಲಿಕ್ಕೆಬೇಕು. ಆದ್ದರಿಂದ ಒಕ್ಕಲಿಗರಿಗೆ ಮಳೆಯ ಭರವಸೆಯನ್ನು ಹಿಡಿಯಲಿಕ್ಕೆ ಬರುವದಿಲ್ಲ. ವೇಳೆಗೆ ಸರಿಯಾಗಿ ಸಾಕಷ್ಟು ಮಳೆಯಾದರೆ ನೆಟ್ಟಗೆ. ಇಲ್ಲದೇ ಹೋದರೆ ಬರಗಾಲದ ಅಂಜಿಕೆಯು ಬಹುತರವಾಗಿ ಎಲ್ಲ ಭಾಗಗಳಲ್ಲಿಯೂ ಇರುತ್ತದೆ.

## ಪ್ರಶ್ನೆಗಳು

೧. ಹಿಮಾಲಯ ಪರ್ವತಗಳಿಂದ ಹಿಂದುಸ್ಥಾನ ದೇಶಕ್ಕೆ ಆಗುವ ಲಾಭಗಳನ್ನು ಹೇಳಿರಿ.

೨. ಹಿಂದುಸ್ಥಾನ ದೇಶವು ಏಶಿಯಾ ಖಂಡದಲ್ಲಿದ್ದರೂ ಅದರಿಂದ ಸ್ವತಂತ್ರವಾಗಿರುವದಕ್ಕೆ ಕಾರಣ ಕೊಡಿರಿ.

೩. ಕೊಂಕಣದಲ್ಲಿ ಮಳೆ ಹೆಚ್ಚು. ಯಾಕೆ? ಮದ್ರಾಸ ಇಲಾಖೆಯೊಳಗೆ ಚಳಿಗಾಲದಲ್ಲಿಯೂ ಮಳೆಯಾಗುತ್ತದೆ. ಯಾಕೆ?

೪. 'ಹಿಂತಿರುಗುವ' ಗಾಳಿಗಳು ಯಾವವು? ಅವು ಯಾವ ಮಾರ್ಗದಿಂದ ಬೀಸುತ್ತವೆ?

೫. ಹಿಂದುಸ್ಥಾನ ದೇಶದ ಮೇಲೆ ಮುನ್ಸೂನ ಗಾಳಿಗಳು ಹೇಗೆ ಬೀಸುತ್ತವೆ ಎಂಬದನ್ನು ಸ್ವಲ್ಪದರಲ್ಲಿ ವರ್ಣಿಸಿರಿ.

ಪಾಠ ೭

## ಕಾಶ್ಮೀರ

ಹಿಮಾಲಯದ ಅಡಿಯಲ್ಲಿಯೂ ಅದರ ದಕ್ಷಿಣದ ಇಳುಕಲಿನ ಮೇಲೆಯೂ ಜನವಸತಿಯು ಇರುತ್ತದೆ. ಪಶ್ಚಿಮ ಭಾಗದಲ್ಲಿ ಸಿಂಧೂ ನದಿಯೂ ಅದಕ್ಕೆ ಕೂಡುವ ಝೀಲಮ್, ಸತಲಜ, ಚಿನಾಬ, ರಾವಿ ಮತ್ತು ಬಿಯಾಸ



ಆಕೃತಿ ೧೩ ಕಾಶ್ಮೀರದ ನೋಟ

ಎಂಬ ಹೊಳೆಗಳೂ ಹರಿಯುತ್ತವೆ. ಝೀಲಮ್ ಹೊಳೆಯ ಕೊಳ್ಳದೊಳಗೆ ಕಾಶ್ಮೀರ ಸಂಸ್ಥಾನವಿರುತ್ತದೆ. ಈ ಸಂಸ್ಥಾನವು ಆಕಾರದಲ್ಲಿ ಸಾಕಷ್ಟು

ದೊಡ್ಡದಿರುತ್ತದೆ. ಝೀಲಮ್ ಕೊಳ್ಳದ ಹೊರಗೆ ಅದು ಸಿಂಧೂ ನದಿಯ ವರೆಗೆ ಪಸರಿಸಿರುತ್ತದೆ. ಆದರೆ ಈ ಸಂಸ್ಥಾನದ ಅತಿ ಮಹತ್ವವಾದದ್ದೂ ಮತ್ತು ದಟ್ಟವಾದ ಜನವಸತಿಯುಳ್ಳದ್ದೂ ಆದ ಭಾಗವು ಝೀಲಮ್‌ದ ಕೊಳ್ಳ ದಲ್ಲಿಯೇ ಇರುತ್ತದೆ. ಈ ಕೊಳ್ಳದೊಳಗೆ ಉಲರ ಎಂಬ ದೊಡ್ಡ ಸರೋವರ ವಿರುತ್ತದೆ. ಇದೇ ಸರೋವರದೊಳಗಿಂದಲೇ ಝೀಲಮ್ ಹೊಳೆಯು ಹರಿಯು ತ್ತದೆ. ಈ ಭಾಗದಲ್ಲಿಯ ಕೊಳ್ಳವು ಸಪಾಟಾಗಿದ್ದು, ಸಮುದ್ರ ಸಪಾಟಿಯಿಂದ ೬೦೦೦ ಫೂಟು ಎತ್ತರದಲ್ಲಿರುತ್ತದೆ.

ಕಾಶ್ಮೀರವು ಎತ್ತರದ ಮೇಲಿರುವದರಿಂದ ಅಲ್ಲಿಯ ಹವೆಯು ಯಾವಾ ಗಲೂ ತಂಪಾಗಿರುತ್ತದೆ. ಚಳಿಗಾಲದಲ್ಲಿಯಂತೂ ಅಲ್ಲಿ ಹಿಮವು ಬೀಳುತ್ತದೆ. ಸುತ್ತಲೂ ಇರುವ ಹಿಮಾಲಯ ಪರ್ವತದೊಳಗಿನ ಉನ್ನತವಾದ ಶಿಖರಗಳು ಯಾವಾಗಲೂ ಬರ್ಫದಿಂದ ಮುಚ್ಚಿರುತ್ತವೆ. ಇಡೀ ವರುಷದಲ್ಲೆಲ್ಲ ತಂಪು ಹವೆ ಇರುವದರಿಂದ, ಇಲ್ಲಿ ಉತ್ತಮವಾದ ಹಣ್ಣುಹಂಪಲುಗಳು ಬೆಳೆಯು ತ್ತವೆ. ಹೊಳೆಯ ಎರಡೂ ದಂಡೆಯ ಮೇಲಿರುವ ಗುಡ್ಡಗಳ ಇಳುಕಲಗಳ ಮೇಲೆ ಹಣ್ಣುದೋಟಗಳನ್ನು ಮಾಡಿರುತ್ತಾರೆ. ಸಫರಚಂದ, ಅಕ್ರೋಡ, ಚೆರೀ, ಪೆಅರ್ ಮುಂತಾದ ಹಣ್ಣುಗಳು ಹೇರಳವಾಗಿ ಬೆಳೆಯುತ್ತವೆ. ಇಲ್ಲಿಯ ಜನರು ಬೇಸಿಗೆಯಲ್ಲಿ ಹಣ್ಣುಗಳನ್ನು ಒಣಗಿಸಿ ಕಾದಿಡುತ್ತಾರೆ. ಕಾಶ್ಮೀರ ಮತ್ತು ಹಿಂದುಸ್ಥಾನಗಳ ನಡುವೆ ಲೈನು ಮಾರ್ಗಗಳಾಗುತ್ತಿರುತ್ತವೆ. ಬರು ಹೋಗುವದು ಹೆಚ್ಚಾಯಿತೆಂದರೆ, ಅಲ್ಲಿ ಬೆಳೆಯುವ ಹಣ್ಣುಹಂಪಲುಗಳಿಗೆ ಹೆಚ್ಚಿನ ಬೆಲೆ ಬರಬಹುದು. ಕಾಶ್ಮೀರದಲ್ಲಿ ಗುಲಾಬೀ ಹೂಗಳು ಎಲ್ಲ ಕಡೆ ಯಲ್ಲಿಯೂ ಆಗುತ್ತವೆ. ಮಾರ್ಗಗಳಿಗೂ ಹೊಲಗಳಿಗೂ ಬೇಲಿಯ ಸಲುವಾಗಿ ಗುಲಾಬೀ ಗಿಡಗಳನ್ನೇ ಉಪಯೋಗಿಸುತ್ತಾರೆ. ಆದ್ದರಿಂದ ಗುಡ್ಡಗಳ ಇಳುಕಲಗಳ ಮೇಲೆ ಸುಂದರವಾದ ನಾನಾ ತರದ ಬಣ್ಣದ ಹೂಗಳ ಅಂದ ವಾದ ಗಾಲೀಚಗಳನ್ನು ಹಾಸಿದಂತೆ ಕಂಗೊಳಿಸುತ್ತದೆ.

ಬಾರಾಮುಲಾದಿಂದ ಕಾಶ್ಮೀರದ ವರೆಗೆ ಡೋಣಿಗಳಲ್ಲಿ ಉಲರ ಸರೋ ವರದೊಳಗಿಂದ ಪ್ರವಾಸಮಾಡಿದರೆ, ಎರಡೂ ಬದಿಗೆ ರಮಣೀಯವಾದ ಸೃಷ್ಟಿಸೌಂದರ್ಯವು ಕಾಣುತ್ತದೆ. ಆಗ ನಾವು ನಂದನವನದೊಳಗಿಂದಲೇ ಪ್ರವಾಸ ಮಾಡುವಂತೆ ಅನಿಸುತ್ತದೆ. ಸರೋವರದ ದಂಡೆಗುಂಟ ಮೊಗಲ ಬಾದಶಹರು ಅಂದವಾದ ಎಷ್ಟೋ ಉದ್ಯಾನಗಳನ್ನು ತಯಾರಿಸಿರುತ್ತಾರೆ.

ಶಾಲಿಮಾರ, ನಿಶಾತ ಎಂಬ ಉದ್ಯಾನಗಳು ಇಂದಿಗೂ ನೋಡತಕ್ಕಂಥವುಗಳಾಗಿರುತ್ತವೆ. ಪ್ರತಿ ವರುಷ ಎಷ್ಟೋ ಪರದೇಶದ ಪ್ರವಾಸಿಕರು ಈ ನಂದನ ವನವನ್ನು ನೋಡಲು ಬರುತ್ತಾರೆ. ಈ ಪ್ರವಾಸಿಕರಿಂದ ಅಲ್ಲಿಯ ಜನರಿಗೆ,



ಆಕೃತಿ ೧೪ 'ಶಾಲಿಮಾರ' ಎಂಬ ಉದ್ಯಾನವು

ವಿಶೇಷತಃ ಅಲ್ಲಿಯ ವ್ಯಾಪಾರಸ್ಥರಿಗೆ ಸಾಕಷ್ಟು ಲಾಭವಾಗುತ್ತದೆ. ಹೊಳೆಯೊಳಗೆ ಯಾವಾಗಲೂ ಡೋಣಿಗಳ ಗದ್ದಲವೇ ಇರುತ್ತದೆ. ಡೋಣಿಗಳಲ್ಲಿ ಎಷ್ಟೋ ಪ್ರಕಾರಗಳಿರುತ್ತವೆ. ಅವುಗಳಲ್ಲಿ ಬಂಗಲೆ, ಪರಿಂಡಾ, ಡುಂಗಾ, ಶಿಕಾರೀ ಎಂಬ ಅನೇಕ ವಿಧಗಳಿರುತ್ತವೆ. ಡುಂಗಾ ಎಂಬ ಡೋಣಿಯನ್ನು

ಸರಕುಗಳ ಸಲುವಾಗಿ ಉಪಯೋಗಿಸುತ್ತಾರೆ. ಪರಿಂಡಾ ಮತ್ತು ಶಿಕಾರೀ ಎಂಬ ಡೋಣಿಗಳು ವೇಗದಿಂದ ಹೋಗುತ್ತವೆ. ಎಷ್ಟೋ ನಾವಿಕರು ತಮ್ಮ ಡೋಣಿಗಳಲ್ಲಿಯೇ ವಾಸಿಸುತ್ತಾರೆ. ಮೂರು ಮೂರು ತಲೆಗಳಿಂದಲೂ ಅವರು ತಮ್ಮ ಡೋಣಿಗಳಲ್ಲಿಯೇ ವಾಸಿಸುತ್ತಾರೆ. ನಾವೆಯ ಒಂದು ಬದಿಗೆ ಅವರ ಅಡಿಗೆಯ ಮನೆಯಿರುತ್ತದೆ. ಇನ್ನೊಂದು ಕಡೆಗೆ ಪ್ರವಾಸಿಕರ ಸಲುವಾಗಿ ಇರಲು ಅನುವು ಮಾಡಿರುತ್ತಾರೆ.

ಕಾಶ್ಮೀರದಲ್ಲಿ ಸುಮಾರು ೨೫ ರಿಂದ ೩೦ ಇಂಚಿನ ವರೆಗೆ ಮಳೆ ಬೀಳುತ್ತದೆ. ಹೆಚ್ಚಾಗಿ ಮಳೆಯು ಜೂನ ತಿಂಗಳಿನಿಂದ ಆಕ್ಟೋಬರದ ವರೆಗೆ ಆಗುತ್ತದೆ. ಜಾನೇವಾರೀ ಮತ್ತು ಫೇಬ್ರುವರೀ ತಿಂಗಳುಗಳಲ್ಲಿಯೂ ಸಹ ಹಿಮ ರೂಪದಿಂದ ತುಸು ಮಳೆಯಾಗುತ್ತದೆ. ಗುಡ್ಡಗಳ ಇಳುಕಲಿನ ಮೇಲೆಯೂ, ಮತ್ತು ಅಡಿಯಲ್ಲಿಯೂ ಜನರು ಒಕ್ಕಲುತನವನ್ನು ಮಾಡುತ್ತಾರೆ. ನೀರಿನ ಸೌಕರ್ಯವು ಚನ್ನಾಗಿರುವ ಸ್ಥಳದಲ್ಲಿ ಭತ್ತವನ್ನು ಬೆಳೆಯುತ್ತಾರೆ. ಮಳೆಯ ಪ್ರಮಾಣವು ಕಡಿಮೆ ಇದ್ದ ಭಾಗಗಳಲ್ಲಿ ಗೋದಿ ಮತ್ತು ಗೋವಿನಜೋಳವನ್ನು ಬೆಳೆಯುತ್ತಾರೆ. ಇತ್ತಲಾಗಿ ಕಾಶ್ಮೀರದಲ್ಲಿ ಬಟಾಟೆಗಳನ್ನು ಬಹಳವಾಗಿ ಬೆಳೆಯಹತ್ತಿದ್ದಾರೆ. ಗುಡ್ಡಗಳ ಮೇಲೆಯೂ, ಎತ್ತರವಾದ ಪ್ರದೇಶಗಳಲ್ಲಿಯೂ ದಟ್ಟಾದ ಹಳವುಗಳು ಇರುತ್ತವೆ. ತೇಗು, ದೇವದಾರ, ಪಾಯಿನ, ಸ್ಪ್ರೂಸ, ಬೀಚ ಮುಂತಾದ ಎಷ್ಟೋ ತರದ ವೃಕ್ಷಗಳು ಈ ಅರಣ್ಯಗಳಲ್ಲಿ ಇರುತ್ತವೆ. ಹೊಳೆಯ ದಂಡೆಯ ಮೇಲೆ 'ಪಾಪ್ಲರ' (ಸಫೇತ) ಎಂಬ ಗಿಡಗಳು ಬೆಳೆಯುತ್ತವೆ. ಈ ಗಿಡಗಳ ತೊಗಟೆಯು ಬೆಳ್ಳಗಿದ್ದು ಅವು ೫೦ ರಿಂದ ೧೦೦ ಫೂಟು ಎತ್ತರ ಬೆಳೆಯುತ್ತವೆ. ಕಾಶ್ಮೀರದ ಜನರು ಕಟ್ಟಿಗೆಯಲ್ಲಿ ಕೆತ್ತಿಗೆಯ ಕೆಲಸವನ್ನು ಮಾಡುವದರಲ್ಲಿ ಬಹಳ ಕುಶಲರಾಗಿರುತ್ತಾರೆ. ಅಕ್ರೋಡದ ಕಟ್ಟಿಗೆಯು ಈ ಕೆಲಸಕ್ಕೆ ತಕ್ಕದ್ದಾಗಿರುತ್ತದೆ.

ಝೇಲಮದ ಕೊಳ್ಳವನ್ನು ಬಿಟ್ಟರೆ ಕಾಶ್ಮೀರದ ಉಳಿದ ಭಾಗವೆಲ್ಲ ಬಹುತರವಾಗಿ ಹಾಳಾಗಿಯೇ ಇರುತ್ತದೆ. ಈ ಭಾಗದಲ್ಲಿ ಜನವಸತಿಯು ತೀರ ವಿರಲವಾಗಿರುತ್ತದೆ. ಅನುವು ಇದ್ದಲ್ಲಿ ಜನರು ಒಕ್ಕಲತನವನ್ನು ಮಾಡುತ್ತಾರೆ. ಇಲ್ಲವೆ ಹೊಳೆಗಳಲ್ಲಿ ಮೀನು ಹಿಡಿಯುವ ಉದ್ಯೋಗವನ್ನು ಮಾಡುತ್ತಾರೆ. ಒಕ್ಕಲತನವನ್ನು ಬಿಟ್ಟರೆ ಜನರ ಎರಡನೇ ಮುಖ್ಯ ಉದ್ಯೋಗವೆಂದರೆ ಕುರಿಗಳನ್ನು ಸಾಕುವದು. ಕಾಶ್ಮೀರದ ಶಾಲುಗಳೂ, ಗಾಲೀಚಗಳೂ

ಜಗತ್ಪ್ರಸಿದ್ಧವಾಗಿರುತ್ತವೆ. ಕಾಶ್ಮೀರೀ ಜನರು ಚಲುವರಾಗಿರುತ್ತಾರೆ. ಅವರು ಎತ್ತರವಾದ ಹಣಿಯುಳ್ಳವರೂ, ಕಪ್ಪು ಕಣ್ಣಿನವರೂ, ನೀಟಾದ ಮೂಗಿನವರೂ, ದೊಡ್ಡ ತಲೆಯವರೂ ಆಗಿರುತ್ತಾರೆ. ನಮ್ಮ ಮಹಾಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರೂ ಇವರ ವಂಶಜರು ಕಾಶ್ಮೀರದವರೇ ಆಗಿರುತ್ತಾರೆ. ಪೂರ್ವ ಕಾಲದಲ್ಲಿ ಕಾಶ್ಮೀರದ ಪಂಡಿತರು ಸಂಸ್ಕೃತ ವಿದ್ಯೆಯಲ್ಲಿ ಪ್ರಸಿದ್ಧರಿದ್ದರು. ಕಾಶ್ಮೀರದ ಒಕ್ಕಲಿಗನು ಗಟ್ಟಿಗನಾಗಿದ್ದು ಅವನ ಉಡುಪು ತೀರ ಸಾದಾ ಇರುತ್ತದೆ. ಪಾಯಜಮಾ (ಸೈಲಾದ ಚೊಣ್ಣ), ಅಂಗಿ ಅದರ ಮೇಲೆ ಉಣ್ಣೆಯ ಸೈಲಾದ ಝುಗೆಯನ್ನು ಹಾಕಿಕೊಳ್ಳುತ್ತಾನೆ. ಮೈಯಲ್ಲಿ ಕಾವು ಬರಬೇಕೆಂದು ಅವರು ಕೊರಳೊಳಗೆ ಸಣ್ಣ ಸಣ್ಣ ಅಗ್ಗಿಷ್ಟಿಗೆಗಳನ್ನು ಕಟ್ಟಿಕೊಳ್ಳುತ್ತಾರೆ. ಇವುಗಳಿಗೆ ಅವರು 'ಕಾಂಗ್ರಿ' ಎಂದೆನ್ನುತ್ತಾರೆ. ಈ ಜನರ ಮನೆಗಳು ಮೇಲಟ್ಟಿನವು ಇರುತ್ತವೆ. ಕೆಳಗಿನ ಭಾಗದಲ್ಲಿ ದನಗಳನ್ನು ಕಟ್ಟುತ್ತಾರೆ. ಮೇಲಂತಸ್ತಿನಲ್ಲಿ ತಾವು ವಾಸಿಸುತ್ತಾರೆ. ಇಲ್ಲಿಯ ಜನರ ಜೀವನವು ಕಷ್ಟಮಯವಾದದ್ದೇ ಇರುತ್ತದೆ. ಹೊರಗಿನಿಂದ ಬಂದವರಿಗೆ ನಂದನವನದ ಶೋಭೆಯಿಂದ ಸಮಾಧಾನವಾಗುತ್ತದೆ. ಮತ್ತು ಅವರಿಗೆ ಕಾಶ್ಮೀರೀ ಜನರ ಮತ್ಸರವೂ ಅನಿಸಬಹುದು. ಆದರೆ ಇಲ್ಲಿಯ ಜನರು ಮಾತ್ರ ತಮ್ಮ ಜೀವನವನ್ನು ಹೇಗಾದರೂ ಮಾಡಿ ಸಾಗಿಸುತ್ತಾರೆ. ಪಾಪ! ಅವರಿಗೆ ಮೈಮೇಲೆ ಹಾಕಿಕೊಳ್ಳಲಿಕ್ಕೆ ಮತ್ತೊಂದು ನಿಲುವಂಗಿಯು ಸಹ ಇರುವದಿಲ್ಲ!



ಆಕೃತಿ ೧೫ ಕಾಶ್ಮೀರಧ ಹೆಂಗಸು

## ಪ್ರಶ್ನೆಗಳು

೧. ಕಾಶ್ಮೀರದ ಹವಾಮಾನದ ವರ್ಣನೆಯನ್ನು ಬರೆಯಿರಿ.

೨. ಕಾಶ್ಮೀರದ ಮುಖ್ಯವಾದ ಹುಟ್ಟುವಳಿಗಳು ಯಾವವು? ಜನರ ಮುಖ್ಯವಾದ ಉದ್ಯೋಗಗಳು ಯಾವವು?

೩. ಕಾಶ್ಮೀರಕ್ಕೆ ಹಿಂದುಸ್ಥಾನದ 'ನಂದನವನ'ವೆಂದು ಯಾಕೆ ಕರೆಯುತ್ತಾರೆ?

೪. ಡೋಣಿಗಳಲ್ಲಿ ಮುಖ್ಯವಾದ ಪ್ರಕಾರಗಳೆಷ್ಟು? ಅವುಗಳನ್ನು ಯಾತರ ಸಲುವಾಗಿ ಉಪಯೋಗಿಸುತ್ತಾರೆ?

೫. ಕಾಶ್ಮೀರ ಪ್ರವಾಸಕ್ಕೆ ನೀವು ಹೋದರೆ ಬರುವ ಮುಂದೆ ಅಲ್ಲಿಂದ ಏನೇನು ತರುವಿರಿ? ಯಾಕೆ?

೬. ಕಾಶ್ಮೀರೀ ಒಕ್ಕಲಿಗನನ್ನು ಸ್ವಲ್ಪದರಲ್ಲಿ ವರ್ಣಿಸಿರಿ.

ಪಾಠ ೮

# ಪೂರ್ವ ಪಂಜಾಬ

ಕಾಶ್ಮೀರದಿಂದ ಹೊರಟು ನಾವು ದಕ್ಷಿಣಕ್ಕೆ ಬಂದರೆ ಬೈಲುಸೀಮೆಗೆ ಬಂದು ತಲಪುತ್ತೇವೆ. ಈ ಬೈಲುಸೀಮೆಯೆಂದರೆನೇ ಪಂಜಾಬ ಪ್ರಾಂತವು. ಸಿಂಧೂ ನದಿಗೆ ಬಂದು ಕೂಡುವ ಐದು ಹೊಳೆಗಳು ಈ ಪ್ರಾಂತದಲ್ಲಿ ಹರಿಯುವದರಿಂದ, ಇದಕ್ಕೆ 'ಪಂಜಾಬ' ಎಂಬ ಹೆಸರು ಬಂದಿದೆ. ಮೊದಲು ಇದು ಒಂದೇ ದೊಡ್ಡ ಪ್ರಾಂತವಾಗಿತ್ತು. ಆದರೆ ೧೯೪೭ರಲ್ಲಿ ನಮ್ಮ ದೇಶದ ವಿಚ್ಛೇದನೆಯಾಗಿ ಪಂಜಾಬ ಪ್ರಾಂತದಲ್ಲಿ ಪೂರ್ವ ಪಂಜಾಬ ಮತ್ತು ಪಶ್ಚಿಮ ಪಂಜಾಬ ಎಂಬ ಎರಡು ಪ್ರಾಂತಗಳು ನಿರ್ಮಾಣವಾದವು. ಪೂರ್ವ ಪಂಜಾಬವು ಹಿಂದುಸ್ಥಾನದೊಳಗೆ ಬರುತ್ತದೆ. ಪಶ್ಚಿಮ ಪಂಜಾಬವು ಪಾಕಿಸ್ತಾನದೊಳಗೆ ಹೋಗುತ್ತದೆ.

ರಾವೀ, ಬಿಯಾಸ ಮತ್ತು ಸತಲಜ ಹೊಳೆಗಳ ಉಗಮದ ಕಡೆಯ ಭಾಗವು ಪೂರ್ವ ಪಂಜಾಬದಲ್ಲಿ ಬರುತ್ತದೆ. ಗುರುದಾಸಪೂರ, ಅಮೃತಸರ, ಜಾಲಂದರ ಮತ್ತು ಫಿರೋಜಪೂರ ಎಂಬ ಜಿಲ್ಲೆಗಳು ಪೂರ್ವ ಪಂಜಾಬದೊಳಗಿನ ಪಾಕಿಸ್ತಾನದ ಗಡಿಯಲ್ಲಿರುತ್ತವೆ. ಇಲ್ಲಿಂದ ಪೂರ್ವಕ್ಕೆ ಯಮುನಾ ನದಿಯವರೆಗೆ ಮತ್ತು ದಕ್ಷಿಣಕ್ಕೆ ರಾಜಸ್ಥಾನದವರೆಗೆ ಈ ಪ್ರಾಂತವು ಪಸರಿಸಿರುತ್ತದೆ. ಈ ಪ್ರಾಂತದೊಳಗೆ ಒಟ್ಟಿಗೆ ೧೩ ಜಿಲ್ಲೆಗಳಿದ್ದು, ಜನಸಂಖ್ಯೆಯು

ಒಂದೂವರೆ ಕೋಟಿ ಇರುತ್ತದೆ. ಪತಿಯಾಳಾ, ನಾಭಾ, ಜಿಂದ, ಕಪುರ್ಥಳಾ ಮುಂತಾದ ಸಂಸ್ಥಾನಗಳು ಇರುತ್ತವೆ. ಈ ಪ್ರಾಂತದೊಳಗೆ ಈಗ ಮುಖ್ಯವಾಗಿ ಹಿಂದೂ ಮತ್ತು ಶೀಖ ಜನರೇ ಇರುತ್ತಾರೆ. ಪೂರ್ವ ಪಂಜಾಬದೊಳಗೆ ದಕ್ಷಿಣೋತ್ತರವಾಗಿ ಮೂರು ಸ್ವಾಭಾವಿಕ ವಿಭಾಗಗಳಾಗುತ್ತವೆ:-(೧) ಉತ್ತರ




ಆಕೃತಿ ೧೭ ಪೂರ್ವ ಪಂಜಾಬ

ವಲ್ಲಿಯ ಗುಡ್ಡಗಾಡು ಪ್ರದೇಶ ಮತ್ತು ಪರ್ವತಗಳ ಅಡಿಯಲ್ಲಿರುವ ಪ್ರದೇಶ; (೨) ಮಧ್ಯಭಾಗದ ಕಾಲುವೆಗಳ ಪ್ರದೇಶ; (೩) ದಕ್ಷಿಣದ ಕಡೆಯ ಬರಗಾಲದ ಪ್ರದೇಶ. ಪಂಜಾಬದೊಳಗಿನ ಮುಖ್ಯ ಉದ್ಯೋಗವು ಒಕ್ಕಲತನವು. ಉತ್ತರ ಭಾಗದಲ್ಲಿ ಕಾಂಗ್ರಾ, ಗುರುದಾಸಪೂರ, ಹೊಶ್ಯಾರಪೂರ ಮತ್ತು ಅಂಬಾಲಾ

ಎಂಬ ಜಿಲ್ಲೆಗಳು ಬರುತ್ತವೆ. ಈ ಭಾಗದಲ್ಲಿ ಕಾಲುವೆಗಳಾಗಲೀ, ರೇಲು ದಾರಿಗಳಾಗಲೀ ಮಹತ್ವವಾಗಿರುವದಿಲ್ಲ. ಇಲ್ಲಿಯ ಒಕ್ಕಲಿಗನು ನಿಸರ್ಗದ ಮೇಲೆಯೇ ಅವಲಂಬಿಸಿರುತ್ತಾನೆ. ಈ ಭಾಗದ ಮೇಲೆ ಸೃಷ್ಟಿಯ ಕೃಪೆಯು ಯಾವಾಗಲೂ ಇರುತ್ತದೆ. ಇಲ್ಲಿ ಯಾವಾಗಲೂ ಮೂವತ್ತರಿಂದ ನಾಲ್ವತ್ತು ಇಂಚಿನವರೆಗೆ ಮಳೆಯು ಆಗುತ್ತದೆ. ಮಳೆಯಾಗದೇ ಬರಬೀಳುವ ಅಂಜಿಕೆಯೇ ಇರುವದಿಲ್ಲ. ಕಬ್ಬು, ಹತ್ತಿ ಮತ್ತು ಗೋದಿಯ ಬೆಳೆಗಳು ಚನ್ನಾಗಿ ಬರುತ್ತವೆ. ಬಾವಿಗಳಿಗೆ ನೀರಾದರೂ ಮೇಲೆಯೇ ಬೀಳುತ್ತದೆ. ಹಣ್ಣುಹಂಪಲುಗಳು ಚನ್ನಾಗಿ ಬರುತ್ತವೆ. ಇಲ್ಲಿಯ ಮಾವಿನ ಹಣ್ಣುಗಳು ಪ್ರಸಿದ್ಧವಾಗಿರುತ್ತವೆ. ಹವೆಯು ಸಮಶೀತೋಷ್ಣವಾದದ್ದಿರುತ್ತದೆ. ಪಂಜಾಬದ ಉಳಿದ ಭಾಗಕ್ಕಿಂತಲೂ ಇಲ್ಲಿಯ ಹವೆಯೊಳಗೆ ಆರ್ದ್ರತೆಯು ಹೆಚ್ಚಾಗಿರುತ್ತದೆ. ಭೂಮಿಯು ಫಲವತ್ತಾಗಿರುವದರಿಂದ ಜನವಸತಿಯಾದರೂ ದಟ್ಟಾಗಿರುತ್ತದೆ.

ಈ ಭಾಗದ ಒಕ್ಕಲಿಗರಲ್ಲಿ ಮುಖ್ಯವಾಗಿ ರಜಪೂತರೂ, ಜಾಟರೂ ಇರುತ್ತಾರೆ. ರಜಪೂತ ಒಕ್ಕಲಿಗನು ಒಕ್ಕಲತನದಲ್ಲಿ ಬಹಳ ಹಿಂದುಳಿದವನಿರುತ್ತಾನೆ. ತಾನು ಶೂರ ಸಿಪಾಯಿಯಾಗಿದ್ದು, ಒಕ್ಕಲತನವನ್ನು ಮಾಡುವದೆಂದರೆ ಅವನಿಗೆ ಕಡಿಮೆ ತರದ್ದೆಂದು ಅನಿಸುತ್ತದೆ. ಹೊಲದಲ್ಲಿ ಸ್ವತಃ ದುಡಿಯಬೇಕೆಂಬ ಲವಲವಿಕೆಯು ಅವನಲ್ಲಿ ಇರುವದಿಲ್ಲ. ಹೊಲದೊಳಗಿನ ಕಷ್ಟದ ಕೆಲಸವನ್ನು ಆಳುಗಳ ಮೇಲೆ ಬಿಟ್ಟು, ತಾನು ಗುಡುಗುಡಿಯನ್ನು ಸೇದುತ್ತ ಕೂಡ್ರುವದರೊಳಗೆ ಆನಂದಪಡುತ್ತಾನೆ. ಹೆಂಗಸರು ಪರದೆಯೊಳಗೆ (ಗೋಷ) ಇರುವದರಿಂದ, ಅವರ ಉಪಯೋಗವು ಆತನಿಗೆ ಎಳ್ಳಷ್ಟಾದರೂ ಆಗುವದಿಲ್ಲ. ಮಧ್ಯಾಹ್ನದ ಊಟವನ್ನು ಮುಗಿಸಿಕೊಂಡು ಅವನು ಹೊಲಕ್ಕೆ ಹೋಗುತ್ತಾನೆ. ಆದ್ದರಿಂದ ತುಂಬಿದ ಹೊಟ್ಟೆಯಿಂದ ಕೆಲಸವಾಗುವದಿಲ್ಲ. ಆದರೆ ಜಾಟ ಒಕ್ಕಲಿಗನು ಮಾತ್ರ ಇದಕ್ಕೆ ತೀರ ವಿರುದ್ಧವಾಗಿರುತ್ತಾನೆ. ಆತನು ಮುಂಜಾವಿನಿಂದ ಸಂಜೆಯವರೆಗೆ ಹೊಲದಲ್ಲಿ ದುಡಿಯುತ್ತಿರುತ್ತಾನೆ. ಅವನ ಹೆಂಡತಿಯು ಅವನ ಸಲುವಾಗಿ ಮಧ್ಯಾಹ್ನದ ಊಟವನ್ನು ಹೊಲಕ್ಕೆ ತೆಗೆದುಕೊಂಡು ಹೋಗುತ್ತಾಳೆ. ಮತ್ತು ಹೊಲಗೆಲಸದಲ್ಲಿ ಗಂಡನಿಗೆ ನೆರವಾಗುತ್ತಾಳೆ. ಜಾಟ ಒಕ್ಕಲಿಗನು ಫಲವತ್ತಾದ ಭೂಮಿಯಿಂದ ಸಾಕಷ್ಟು ಲಾಭಮಾಡಿಕೊಳ್ಳುವನು. ರಜಪೂತ ಒಕ್ಕಲಿಗನಂತೆ ಜಾಟ ಒಕ್ಕಲಿಗನು ಸಾಲದೊಳಗೆ ಮುಳುಗಿರುವದಿಲ್ಲ.

ಅಮೃತಸರ, ಲಾಹೋರ, ಜಾಲಂದರ, ಲುಧಿಯಾನಾ ಮತ್ತು ಫಿರೋಜಪೂರ ಎಂಬ ಜಿಲ್ಲೆಗಳು ಮಧ್ಯಭಾಗದಲ್ಲಿರುತ್ತವೆ. ಈ ಪ್ರದೇಶವು ಸಪಾಟಾಗಿರುತ್ತದೆ. ಈ ಭಾಗದೊಳಗಿನ ಜನವಸತಿಯು ಮುಖ್ಯವಾಗಿ ಹಳ್ಳಿಗಳಲ್ಲಿಯೇ ಇರುತ್ತದೆ. ಇಲ್ಲಿ ಮಳೆಯ ಪ್ರಮಾಣವು ಕಡಿಮೆಯಾಗಿರುತ್ತದೆ. ೧೫ರಿಂದ ೨೦ ಇಂಚಿನವರೆಗೆ ಮಳೆಯಾಗುತ್ತದೆ. ಮಳೆಯ ಪ್ರಮಾಣವು ಪೂರ್ವದಿಂದ ಪಶ್ಚಿಮಕ್ಕೆ ಕಡಿಮೆಯಾಗುತ್ತ ಹೋಗುತ್ತದೆ. ಈ ಭಾಗದಲ್ಲಿ ಮೇಲುಮುದ್ದಿಯ ಮನೆಗಳಿರುತ್ತವೆ. ಮನೆಗಳು ಒಂದಕ್ಕೊಂದು ಹೊಂದಿಕೊಂಡಿದ್ದು ಸುತ್ತಲೂ ಮಣ್ಣಿನ ಗೋಡೆಯು ಇರುತ್ತದೆ. ಹಳ್ಳಿಯ ಸುತ್ತಲೂ ತೋಪುಗಳಿದ್ದು ಕಾಲುವೆ ಮತ್ತು ಲೈನ ದಾರಿಗಳ ಎರಡೂಬದಿಯಲ್ಲಿಸಾಲುಗಿಡಗಳಿರುತ್ತವೆ. ಇಲ್ಲಿಯ ಹವೆಯು ವಿಷಮವಾದದ್ದು. ಅಂದರೆ ಬೇಸಿಗೆಯಲ್ಲಿ ಹೆಚ್ಚು ಬಿಸಿಲೂ, ಚಳಿಗಾಲದಲ್ಲಿ ಹೆಚ್ಚು ಚಳಿಯೂ ಇರುತ್ತದೆ. ಮಳೆ ಕಡಿಮೆಯಾಗಿರುವುದರಿಂದ ಹವೆಯು ಒಣದಾಗಿರುತ್ತದೆ. ಈ ಭಾಗದ ಒಕ್ಕಲಿಗನು ಸಾಕಷ್ಟು ಎತ್ತರ ಉಳ್ಳವನೂ, ಗಟ್ಟಿಗನೂ ಆಗಿರುತ್ತಾನೆ.



ಆಕೃತಿ ೧೭ ಜಾಟ ಒಕ್ಕಲಿಗನು

ಈ ಭಾಗದಲ್ಲಿ ಬಾವಿಗಳೂ, ಕಾಲುವೆಗಳೂ ಸಾಕಷ್ಟು ಇರುವದರಿಂದ, ಮಳೆಯ ಪ್ರಮಾಣವು ಕಡಿಮೆಯಾಗಿದ್ದರೂ ಒಕ್ಕಲತನಕ್ಕೆ ತೊಂದರೆಯಾಗುವದಿಲ್ಲ. ಬೆಳೆ ಚನ್ನಾಗಿ ಬರುವದರಿಂದ ಜನವಸತಿಯಾದರೂ ದಟ್ಟಾಗಿರುತ್ತದೆ. ಇಲ್ಲಿ ಸ್ವಂತ ಭೂಮಿಯಿರುವದೆಂದರೆ ಬಹಳ ಮಹತ್ವದ್ದೆಂದು ಎಣಿಸಲ್ಪಡುತ್ತದೆ. ಆದ್ದರಿಂದಲೇ ಇಲ್ಲಿ ಹೊಲಗಳ ಬೆಲೆಯಾದರೂ ಹೆಚ್ಚಾಗಿರುತ್ತದೆ. ಬರು-ಹೋಗುವ ಸೌಕರ್ಯಗಳು ಇಲ್ಲಿ ಚನ್ನಾಗಿ ಇರುತ್ತವೆ. ಗೋದಿ, ಹತ್ತಿ ಮತ್ತು ಕಡಲೆಗಳು ಇಲ್ಲಿಯ ಮುಖ್ಯವಾದ ಬೆಳೆಗಳು. ಇವು ಹಿಂಗಾರಿಯ

ಬೆಳೆಗಳು. ಮುಂಗಾರಿಯಲ್ಲಿ ಜೋಳವನ್ನು ಬೆಳೆಯುತ್ತಾರೆ. ಇದಲ್ಲದೇ ಎಳ್ಳು, ಸಾಸಿವೆ, ಔಡಲ ಮುಂತಾದ ಎಣ್ಣೆಕಾಳುಗಳನ್ನೂ ಬೆಳೆಯುತ್ತಾರೆ. ಬೇರೆ ಕೆಲವರು ತಂಬಾಕು, ಕಾಯಿಪಲ್ಯಗಳನ್ನು ಬೆಳೆಸುತ್ತಾರೆ. ಅವುಗಳಿಗೆ ಬೆಲೆಯಾದರೂ ಚನ್ನಾಗಿ ಬರುತ್ತದೆ.

ಗುರುಗಾವ, ರೋಹತಕ, ಹಿಸ್ಸಾರ ಮತ್ತು ಕರ್ನಾಳ ಎಂಬ ಜಿಲ್ಲೆಗಳು ದಕ್ಷಿಣ ಭಾಗದಲ್ಲಿ ಬರುತ್ತವೆ. ಇಲ್ಲಿ ಮಳೆಯ ಪ್ರಮಾಣವು ತೀರ ಕಡಿಮೆ ಯಾಗಿರುತ್ತದೆ. ಇಡೀ ವರುಷದಲ್ಲೆಲ್ಲ ೧೦ ರಿಂದ ೧೫ ಇಂಚಿನ ವರೆಗೆ ಮಳೆ ಯಾಗುತ್ತದೆ. ಆದ್ದರಿಂದ ಇಲ್ಲಿ ಬರಗಾಲದ ಅಂಜಿಕೆಯು ಬಹಳವಾಗಿರುತ್ತದೆ. ಆದರೆ ಇತ್ತ ಲಾಗಿ ಅಗಿದ ಯಮುನೆಯ ಕಾಲುವೆಗಳಿಂದ ಬರಗಾಲದ ಸಂಕಟವು ಬಹುಮಟ್ಟಿಗೆ ದೂರಾಗಿರುತ್ತದೆ. ಮಳೆಯಾದ ವರುಷ ಬೆಳೆಯು ಚೆನ್ನಾಗಿ ಬರುತ್ತದೆ. ಕಡಲೆ, ಗೋದಿ ಮತ್ತು ಜವೆಗೋದಿಯ ಬೆಳೆಗಳು ಚೆನ್ನಾಗಿ ಬರುತ್ತವೆ. ಈ ಭಾಗದಲ್ಲಿ ಹಿಂದೂ ಜನಸಂಖ್ಯೆಯೇ ಹೆಚ್ಚಾಗಿರುತ್ತದೆ. ಇಲ್ಲಿಯ ಒಕ್ಕಲಿಗರು ಒಕ್ಕಲತನವನ್ನು ಬಿಟ್ಟು ಸೈನ್ಯದೊಳಗೆ ಹೋಗಲು ಮನಸ್ಸಿಲ್ಲದವರಾಗಿರುತ್ತಾರೆ.

## ಪ್ರಶ್ನೆಗಳು

೧. 'ಪಂಜಾಬ' ಎಂಬ ಹೆಸರು ಈ ಪ್ರಾಂತಕ್ಕೆ ಹೇಗೆ ಬಂದಿತು?

೨. ಪೂರ್ವ ಪಂಜಾಬದ ಹವಾಮಾನಗಳನ್ನು ವರ್ಣಿಸಿರಿ.

೩. ಪೂರ್ವಪಂಜಾಬದಲ್ಲಿ ಸ್ವಾಭಾವಿಕವಾಗಿ ಎಷ್ಟು ಭಾಗಗಳನ್ನು ಮಾಡಬಹುದು? ಪ್ರತಿಯೊಂದು ಭಾಗದಲ್ಲಿ ಸಮಾವೇಶವಾಗುವ ಜಿಲ್ಲೆಗಳು ಯಾವವು?

೪. ರಜಪೂತರು ಮತ್ತು ಜಾಟ ಒಕ್ಕಲಿಗರ ಜೀವನಕ್ರಮಗಳನ್ನು ವರ್ಣಿಸಿರಿ.

೫. ಪೂರ್ವ ಪಂಜಾಬದೊಳಗಿನ ಉತ್ತರ, ಮಧ್ಯ ಮತ್ತು ದಕ್ಷಿಣ ಭಾಗಗಳೊಳಗಿನ ಹುಟ್ಟುವಳಿಗಳನ್ನು ಹೇಳಿರಿ.

೬. ಪಂಜಾಬ ಪ್ರಾಂತವು ಎಂದು ಇಬ್ಭಾಗಿಸಲ್ಪಟ್ಟಿತು? ಪಾಕಿಸ್ತಾನದ ಗಡಿಯು ಮೇಲಿರುವ ಪೂರ್ವ ಪಂಜಾಬದ ಜಿಲ್ಲೆಗಳು ಯಾವವು?

ಪಾಠ ೯

# ರಜಪೂತಸ್ಥಾನ

ಪಂಜಾಬದ ದಕ್ಷಿಣಕ್ಕೆ ಥಾರ ಎಂಬ ಉಸುಬಿನ ಅರಣ್ಯವಿದ್ದು, ಅದರ ಪೂರ್ವಕ್ಕೆ ರಜಪೂತಸ್ಥಾನವು ಇರುತ್ತದೆ. ರಜಪೂತಸ್ಥಾನದ ಮಧ್ಯದಲ್ಲಿ ಅರವಲೀ ಎಂಬ ಗುಡ್ಡದ ಸಾಲು ಇರುತ್ತದೆ. ಗುಜರಾಥದ ಬೈಲಿನಿಂದ ದಿಲ್ಲಿಯ ವರೆಗೆ ಪರ್ವತಾವಳಿಯು ವಾಯವ್ಯ-ಈಶಾನ್ಯ ದಿಕ್ಕಿನಲ್ಲಿ ಹಬ್ಬಿರುತ್ತದೆ. ಇದು ಅತಿ ಪ್ರಾಚೀನಕಾಲದ ಪರ್ವತವಿದ್ದು, ಅದರ ಎತ್ತರವಾದ ಭಾಗವೆಲ್ಲ ಸವೆದು ಹೋಗಿರುತ್ತದೆ. ಆದರೂ ಉತ್ತರಕ್ಕೆ ಅಲವಾರದ ಹತ್ತರ ಮತ್ತು ದಕ್ಷಿಣ ತುದಿಯಲ್ಲಿ ಅದು ಸಾಕಷ್ಟು ಉನ್ನತವಾಗಿರುತ್ತದೆ. ದಕ್ಷಿಣದ ತುದಿಯಲ್ಲಿರುವ ಅಬೂ ಎಂಬ ಶಿಖರವು ಸಮುದ್ರ ಸಪಾಟಿಯಿಂದ ೪೦೦೦ ಫೂಟು ಎತ್ತರವಾಗಿರುತ್ತದೆ. ಅರವಲಿಯ ವಾಯವ್ಯ ದಿಕ್ಕಿನಲ್ಲಿರುವ ರಜಪೂತಸ್ಥಾನದ ಭಾಗವು ಒಣದಾದದ್ದೂ, ಬಂಜೆಯಾದದ್ದೂ ಇರುತ್ತದೆ. ಇಲ್ಲಿ ಇಡಿ ವರುಷದೊಳಗೆ ಐದು ಇಂಚಿನಷ್ಟು ಕೂಡ ಮಳೆಯು ಆಗುವದಿಲ್ಲ. ಆದ್ದರಿಂದ ಇದಕ್ಕೆ 'ಮರವಾಡ' ಅಂದರೆ ಮೃತ್ಯುವಿನ ಸ್ಥಳವೆಂಬ ಹೆಸರು ಬಂದಿರುತ್ತದೆ. ಆದರೂ ಹೆಸರಿನಷ್ಟು ಈ ಪ್ರದೇಶವು ಕೆಟ್ಟದ್ದಾಗಿರುವದಿಲ್ಲ. ವಿಶೇಷವಾಗಿ ಪರ್ವತದ ಇಳುಕಲಿನ ಮೇಲಿನ ಪ್ರದೇಶವು ಅದರ ಪಶ್ಚಿಮಕ್ಕಿರುವ ಪ್ರದೇಶಕ್ಕಿಂತ ಚನ್ನಾಗಿರುತ್ತದೆ. ಪರ್ವತದಲ್ಲಿ ಉಗಮವಾಗುವ ಸಣ್ಣ ಸಣ್ಣ ಹೊಳೆಗಳ ಕೊಳ್ಳಗಳಲ್ಲಿ ಜನರು ಒಕ್ಕಲತನವನ್ನು ಮಾಡುತ್ತಾರೆ. ಈ ಎಲ್ಲ ಹೊಳೆಗಳು ಒಟ್ಟುಗೂಡಿ ಆದ ಪ್ರವಾಹಕ್ಕೆ ಲೂನೀ ಹೊಳೆ ಎಂಬ ಹೆಸರು ಇರುತ್ತದೆ. ಈ ಹೊಳೆಯು ಕಚ್ಛದ ರಣದಲ್ಲಿ ಇಲ್ಲದಂತಾಗುತ್ತದೆ. ಇಲ್ಲಿಯ ಬಾವಿಗಳಿಗೆ ೩೦೦ ಫೂಟಿನ ಮೇಲೆ ನೀರು ಬೀಳುತ್ತದೆ. ಯಾವಾಗಲಾದರೂ ಒಮ್ಮೆ ಮಳೆಯಾದರೆ ಅಲ್ಲಲ್ಲಿ ಕೆರೆ-ಸರೋವರಗಳು ಉಂಟಾಗುತ್ತವೆ. ಉಸುಬಿನ ಕಲ್ಲಿನಲ್ಲಿ ಈ ನೀರು ನಿಲ್ಲುವದರಿಂದ ನೀರು ಉಪ್ಪಾಗುತ್ತದೆ. ಈ ಪ್ರಕಾರದಿಂದುಂಟಾದ ಸರೋವರಗಳಲ್ಲಿ ಸಾಂಬರ ಎಂಬ ಸರೋವರವು ಎಲ್ಲಕ್ಕೂ ದೊಡ್ಡದಾಗಿರುತ್ತದೆ. ಇದರ ಕ್ಷೇತ್ರವು ೯೦ ಚೌರಸ ಮೈಲಿನಷ್ಟು ಇರುತ್ತದೆ. ಇಲ್ಲಿ ಎಷ್ಟೋ ಉಪ್ಪಿನ ಸಾಣೆಗಳು ಇರುತ್ತವೆ. ಮರವಾಡದೊಳಗಿನ

ಭೂಮಿಯು ಉಸುಕಿನದಿರುವದರಿಂದ ಸಜ್ಜೆ ಅಥವಾ ಜೋಳದ ಒಂದೇ ಬೆಳೆ ಬರುತ್ತದೆ. ಆದ್ದರಿಂದ ಇಲ್ಲಿಯ ಜನರು ಒಕ್ಕಲತನದ ಮೇಲೆ ಸಂಪೂರ್ಣ ವಾಗಿ ಬಾಳಲಾರರು. ಅವರು ದನ, ಕುರಿ, ಒಂಟೆ ಮುಂತಾದವುಗಳನ್ನು ಸಾಕಿ ಅವುಗಳ ಹೊಟ್ಟೆಗಾಗಿ ಹುಲ್ಲುಗಾವಲನ್ನು ಹುಡುಕುತ್ತ ಯಾವಾಗಲೂ



ಆಕೃತಿ ೧೮ ರಜಪೂತಸ್ಥಾನದೊಳಗಿನ ಬಾವಿಯು

ಅಡ್ಡಾಡಬೇಕಾಗುತ್ತದೆ. ಜೋಧಪೂರ, ಬಿಕಾನೇರ ಎಂಬ ಇತಿಹಾಸ ಪ್ರಸಿದ್ಧ ವಾದ ಸಂಸ್ಥಾನಗಳು ಇದೇ ಭಾಗದಲ್ಲಿ ಇರುತ್ತವೆ. ಬಿಕಾನೇರದ ಮಹಾ ರಾಜನು ಕೋಟ್ಯಾವಧಿ ರೂಪಾಯಿ ವೆಚ್ಚಮಾಡಿ ಸತಜಲ ನದಿಯಿಂದ ಕಾಲು ವೆಯನ್ನು ತಂದು ತನ್ನ ಸಂಸ್ಥಾನದಲ್ಲಿ ನೀರಿನ ಸೌಕರ್ಯವನ್ನು ಮಾಡಿ ಕೊಟ್ಟಿ ರುವನು. ಆದ್ದರಿಂದ ಆ ಸಂಸ್ಥಾನದೊಳಗೆ ಬಹು ದೊಡ್ಡಭಾಗವು ಸಾಗುವಳಿ ಯಾಗಿದ್ದು ಜನವಸತಿಯಾದರೂ ಬೆಳೆಯುತ್ತ ನಡೆದದೆ.

ಅರವಲೀ ಬೆಟ್ಟದ ಆಗ್ನೇಯ ಕಡೆಯ ಭಾಗವು ಮರವಾಡಕ್ಕಿಂತ ಹೆಚ್ಚು ಫಲವತ್ತಾಗಿರುತ್ತದೆ. ಇದಕ್ಕೆ ಮೇವಾಡ ಎಂಬ ಹೆಸರು ಇರುತ್ತದೆ. ಈ ಭಾಗದಲ್ಲಿ ಹರಿಯುವ ಚಂಬಳ ಹೊಳೆಯಿಂದಲೂ ಮತ್ತು ಅದಕ್ಕೆ ಬಂದು ಕೂಡುವ ಬನಾಸ ಎಂಬ ಹೊಳೆಯಿಂದಲೂ ಅಲ್ಲಿ ನೀರಿನ ಸೌಕರ್ಯವು



ಆಕೃತಿ ೧೯ ರಜಪೂತ ವ್ಯಾಪಾರಸ್ಥನು

ಚನ್ನಾಗಿ ಆಗಿರುತ್ತದೆ. ಇದಲ್ಲದೆ ಇಲ್ಲಿ ಮಳೆಯಾದರೂ ೨೫ ಇಂಚಿನವರೆಗೆ ಆಗುತ್ತದೆ. ಆದರೆ ಇಲ್ಲಿಯ ಭೂಮಿಯು ಮಾತ್ರ ಹೇಳಿಕೊಳ್ಳುವಷ್ಟು ಫಲವತ್ತಾಗಿರುವದಿಲ್ಲ. ಜೋಳ, ಸೆಜ್ಜೆ, ಎಣ್ಣೆಯ ಕಾಳುಗಳೇ ಇಲ್ಲಿಯ ಮುಖ್ಯವಾದ ಬೆಳೆಗಳು. ಹಲವು ಕಡೆಯಲ್ಲಿ ಗೋದಿಯಾದರೂ ಬೆಳೆಯುತ್ತದೆ. ಹವಾಮಾನವು ಒಟ್ಟಿನ ಮೇಲೆ ಉಷ್ಣವಾಗಿದ್ದರೂ ಶಕ್ತಿವರ್ಧಕವಾಗಿರುತ್ತದೆ. ಜಯಪೂರ, ಚಿತ್ತೂರ, ಟೊಂಕ, ಬುಂದಿ, ಕೋಟ ಮುಂತಾದ



ಆಕೃತಿ ೨೦ ಚಿತ್ತೂರಿನ ವಿಜಯಸ್ತಂಭ

ಐತಿಹಾಸಿಕ ಸಂಸ್ಥಾನಗಳು ಈ ಭಾಗದಲ್ಲಿರುತ್ತವೆ. ಇಲ್ಲಿಯ ಜನರಿಗೆ ರಜಪೂತರೆಂದೆನ್ನುತ್ತಾರೆ. ತಾವು ಶುದ್ಧ ಆರ್ಯವಂಶದವರೆಂದು ಅವರು ತಿಳಿಯುತ್ತಾರೆ. ಅವರು ಶೂರರಾಗಿರುತ್ತಾರೆ. ಇತ್ತಲಾಗಿ ಈ ಸಂಸ್ಥಾನಗಳನ್ನೆಲ್ಲ ಒಟ್ಟುಗೂಡಿಸಿ ರಾಜಸ್ಥಾನ ಎಂಬ ಹೊಸ ಪ್ರಾಂತವನ್ನು ಮಾಡಿರುತ್ತಾರೆ. ಈಗ ರಾಜಸ್ಥಾನವು ಹಿಂದೀ ಸಂಘ ರಾಜ್ಯದೊಳಗಿನ ಒಂದು ಘಟಕ ರಾಜ್ಯವಾಗಿದ್ದು, ಜಯಪೂರ ಪಟ್ಟಣವು ಅದರ ರಾಜಧಾನಿಯಾಗಿರುತ್ತದೆ. ಜಯಸಿಂಗನೆಂಬ ಅರಸನು ಈ ಪಟ್ಟಣವನ್ನು ಕಟ್ಟಿಸಿದನು. ಅದು ನೋಡತಕ್ಕಂಥಾದ್ದಿರುತ್ತದೆ.

## ಪ್ರಶ್ನೆಗಳು

೧. ‘ಮಾರವಾಡ’ ಎಂಬ ಹೆಸರು ಹೇಗೆ ಉಂಟಾಯಿತು?

೨. ಮಾರವಾಡ ಮತ್ತು ಮೇವಾಡಗಳನ್ನು ಹೋಲಿಸಿರಿ.

೩. ಮೇವಾಡದೊಳಗಿನ ಹುಟ್ಟುವಳಿಗಳನ್ನು ಹೇಳಿರಿ.

೪. ರಜಪೂತಸ್ಥಾನದೊಳಗಿನ ಮುಖ್ಯವಾದ ಹೊಳೆಗಳನ್ನೂ, ಪರ್ವತವನ್ನೂ ಹೇಳಿರಿ.

೫. ರಾಜಸ್ಥಾನದ ರಾಜಧಾನಿಯು ಯಾವದು? ಅದನ್ನು ಯಾರು ಕಟ್ಟಿಸಿದರು?

ಪಾಠ ೧೦

## ಉತ್ತರ ಪ್ರದೇಶ (ಸಂಯುಕ್ತ ಪ್ರಾಂತ)

ಗಂಗೆಯ ಕೊಳ್ಳದೊಳಗಿನ ಪಶ್ಚಿಮದ ಕಡೆಯ ಕೊನೆಯ ಪ್ರಾಂತವೇ ಉತ್ತರ ಪ್ರದೇಶವು. ಸಿಂಧೂ-ಗಂಗಾ ಹೊಳೆಗಳ ಕೊಳ್ಳದ ನಡುವೆ ಅರವಲೀ ಪರ್ವತವಿರುತ್ತದೆ. ದಿಲ್ಲೀ ಮತ್ತು ಅದರ ಸುತ್ತಲಿನ ಪ್ರದೇಶವೆಂದರೆ ಅರವಲೀ ಪರ್ವತದ ಈಶಾನ್ಯ ತುದಿಯ ಭಾಗವು. ದಿಲ್ಲೀ ಪಟ್ಟಣವು ಸಮುದ್ರ ಸಪಾಟಿಯಿಂದ ಕೇವಲ ೭೧೮ ಫೂಟು ಎತ್ತರದಲ್ಲಿರುತ್ತದೆ. ಸಿಂಧೂ-ಗಂಗಾ ಹೊಳೆಗಳ ಕೊಳ್ಳಗಳನ್ನು ಈ ಪಟ್ಟಿಯು ಜೋಡಿಸುತ್ತದೆ. ಪಂಜಾಬದಿಂದ ಗಂಗಾ ನದಿಯ ಕೊಳ್ಳದೊಳಗೆ ಬರಬೇಕಾದರೆ ದಿಲ್ಲಿಯ ಮೇಲಿನಿಂದಲೇ ಬರಬೇಕಾಗುತ್ತದೆ. ಇದರಿಂದ ದಿಲ್ಲೀ ಪಟ್ಟಣಕ್ಕೆ ಅತಿ ಪ್ರಾಚೀನಕಾಲದಿಂದಲೂ ಮಹತ್ವ



ಆಕೃತಿ ೨೦ ಹಿಂದೀ ಪಾರ್ಲಿಮೆಂಟ ಗೃಹವು-ಹೊಸ ದಿಲ್ಲಿ

ಬಂದಿದೆ. ಮತ್ತು ಈವತ್ತಿಗೂ ಅದೇ ಮಹತ್ವವು ಇರುತ್ತದೆ. ಈ ಪಟ್ಟಣವು ಯಮುನೆಯ ದಡದಲ್ಲಿದ್ದು ಹಿಂದೀ ಸಂಘ ರಾಜ್ಯದ ರಾಜಧಾನಿಯಾಗಿರುತ್ತದೆ. ಈ ಪಟ್ಟಣದೊಳಗೆ ಹೊಸ ದಿಲ್ಲಿ ಮತ್ತು ಹಳೇ ದಿಲ್ಲಿ ಎಂಬ ಎರಡು ಭಾಗಗಳಿರುತ್ತವೆ. ಸರಕಾರದ ಕಚೇರಿಗಳೂ, ಕಾಯಿದೆ ಮಂಡಳದ ಸಭಾಗೃಹವೂ, ಮಂತ್ರಿಗಳ ನಿವಾಸಸ್ಥಾನ ಮುಂತಾದವುಗಳೂ ಹೊಸ ದಿಲ್ಲಿಯಲ್ಲಿರುತ್ತವೆ. ದಿಲ್ಲೀ ಪಟ್ಟಣದಲ್ಲಿ ಪ್ರಸಿದ್ಧವಾದ ಕೆಂಪು ಕೋಟೆ, ಜುಮ್ಮಾ ಮಶೀದೆ ಮುಂತಾದ ಎಷ್ಟೋ ಇತಿಹಾಸ ಪ್ರಸಿದ್ಧವಾದ ಪ್ರೇಕ್ಷಣೀಯ ಸ್ಥಳ

ಗಳಿರುತ್ತವೆ. ದಿಲ್ಲೀ ಪಟ್ಟಣವೂ ಅದರ ಸುತ್ತ ಮುತ್ತಲಿನ ಪ್ರದೇಶವೂ ಗಂಗೆಯ ಕೊಳ್ಳದಲ್ಲಿಯೇ ಬರುತ್ತವೆ. ಆದರೆ ಅದರ ರಾಜ್ಯಕಾರಭಾರವು ಮಾತ್ರ ಸ್ವತಂತ್ರ ಪ್ರಾಂತದಂತೆಯೇ ನಡೆಯುತ್ತದೆ.

ಗಂಗಾ ನದಿಯ ಕೊಳ್ಳವು ಪೂರ್ವಕ್ಕೆ ಕ್ರಮೇಣ ಇಳುಕಲಾಗುತ್ತ ಹೋಗುತ್ತದೆ. ಸಮುದ್ರ ಸಪಾಟಿಯಿಂದ ಕಾನಪೂರ ೪೧೬, ಅಲಹಾಬಾದ



ಆಕೃತಿ ೨೨ ಚಾಂದಣೀ ಚೌಕ–ಹಳೇ ದಿಲ್ಲಿ

೩೭೯ ಮತ್ತು ಬನಾರಸ (ಕಾಶೀ) ೨೭೦ ಫೂಟು ಎತ್ತರದ ಮೇಲೆ ಇರುತ್ತವೆ. ಪೂರ್ವಕ್ಕೆ ಹೋದ ಹಾಗೆ ಮಳೆಯ ಪ್ರಮಾಣವು ಹೆಚ್ಚಾಗುತ್ತ ಹೋಗುತ್ತದೆ. ದಿಲ್ಲಿಯಲ್ಲಿ ೨೫ ಇಂಚು, ಕಾನಪೂರದಲ್ಲಿ ೩೨ ಇಂಚು, ಅಲಹಾಬಾದಿನಲ್ಲಿ ೩೭ ಇಂಚು ಮಳೆಯಾಗುತ್ತದೆ. ಜೂನ ತಿಂಗಳಿನಿಂದ ಮಳೆಯು ಆರಂಭವಾಗುತ್ತದೆ. ಜುಲೈ ಮತ್ತು ಅಗಸ್ಟ ತಿಂಗಳಿನಲ್ಲಿ ಹೆಚ್ಚಾಗಿ ಮಳೆಯಾಗುತ್ತದೆ. ಅದು ಸಪ್ಟೆಂಬರ ತಿಂಗಳಿನ ಕೊನೆಗೆ ನಿಲ್ಲುತ್ತದೆ. ಪಶ್ಚಿಮ ಭಾಗದಲ್ಲಿ ಅದು ಮೊದಲು ನಿಲ್ಲುತ್ತದೆ. ಪೂರ್ವ ಭಾಗದಲ್ಲಿ ತುಸು ಹೆಚ್ಚು ದಿವಸಗಳ ವರೆಗೆ ಮಳೆ ಬೀಳುತ್ತದೆ. ಸಂಯುಕ್ತ ಪ್ರಾಂತದ ಹವೆಯು ವಿಷಮವಾಗಿರುತ್ತದೆ. ಸಮುದ್ರ ಸಪಾಟಿಯಿಂದ ಅದು ಎತ್ತರವಿರುವದಿಲ್ಲ. ಆದರೆ ಸಮುದ್ರ

ದಿಂದ ದೂರದಲ್ಲಿರುವದು. ಆದ್ದರಿಂದಲೇ ಅಲ್ಲಿ ಬೇಸಿಗೆಯಲ್ಲಿ ಅತಿ ಬಿಸಿಲೂ, ಚಳಿಗಾಲದಲ್ಲಿ ಅತಿ ಚಳಿಯೂ ಇರುತ್ತದೆ. ಏಪ್ರಿಲ ಮತ್ತು ಮೇ ತಿಂಗಳಿನಲ್ಲಿ ಬಿಸಿಲು ಬಹಳವಾಗಿರುತ್ತದೆ. ಆದರೆ ಮಳೆಗಾಲವು ಆರಂಭವಾದ ಕೂಡಲೆ

ಆಕೃತಿ ೨೩ ಸಂಯುಕ್ತ ಪ್ರಾಂತ

ಹವೆಯಲ್ಲಿ ತಂಪು ಹುಟ್ಟುತ್ತದೆ. ಚಳಿಯು ನೊವ್ಹೆಂಬರ ತಿಂಗಳಿನ ಮಧ್ಯ ದಿಂದ ಆರಂಭವಾಗುತ್ತದೆ.

ಸಂಯುಕ್ತ ಪ್ರಾಂತದ ಅರ್ಧಪಾಲು ಗಂಗಾ-ಯಮುನಾ ಹೊಳೆಗಳ ನಡುವೆ ಇರುತ್ತದೆ. ಆದ್ದರಿಂದಲೇ ಇದಕ್ಕೆ **ದು-ಆಬ** ಎಂದೆನ್ನುತ್ತಾರೆ. ದು-ಆಬ ಅಂದರೆ ಎರಡು ಹೊಳೆಗಳ ನಡುವಿನ ಪ್ರದೇಶ. ಯಮುನೆಯು

ಗಂಗಾ ನದಿಗೆ ಪ್ರಯಾಗದ ಹತ್ತರ ಬಂದು ಕೂಡುತ್ತದೆ. ಅಲ್ಲಿಂದ ತುಸು ಅಂತರದಲ್ಲಿರುವ ಬನಾರಸದ ಹತ್ತರ ಸಂಯುಕ್ತ ಪ್ರಾಂತದ ಗಡಿಯು ಮುಗಿದು ಬಿಹಾರ ಪ್ರಾಂತದ ಗಡಿಯು ಆರಂಭವಾಗುತ್ತದೆ.

ಗಂಗಾ-ಯಮುನಾ ಹೊಳೆಗಳಿಂದ ಹರಿದು ಬಂದ ರೇವೆಯಿಂದ ಇಲ್ಲಿಯ ಭೂಮಿಯು ಉಂಟಾಗಿರುವದರಿಂದ, ಅಲ್ಲಿಯ ನೆಲವು ಅತಿ ಫಲವತ್ತಾಗಿರುತ್ತದೆ. ಪ್ರತಿ ವರುಷ ಮಹಾಪೂರದ ಸಂಗಡ ಬಂದ ರೇವೆಯು ಎರಡೂ ದಂಡೆಗಳ ಮೇಲೆ ಬೀಳುತ್ತದೆ. ಪಶ್ಚಿಮ ಭಾಗದಲ್ಲಿ ಮಳೆಯು ಕಡಿಮೆಯಾದರೂ ಕಾಲುವೆಗಳನ್ನು ಕಟ್ಟಿ ಸಾಕಷ್ಟು ನೀರಿನ ಪೂರೈಕೆಯನ್ನು ಮಾಡಿದ್ದಾರೆ. ಮೀರತ ಮತ್ತು ದು-ಆಬ ಭಾಗಗಳಲ್ಲಿ ಸಾಕಷ್ಟು ಕಾಲುವೆಗಳಿರುತ್ತವೆ. ಗಂಗಾ ನದಿಯ ಉತ್ತರ ದಂಡೆಯ ಮೇಲೆ ಕೆರೆ-ಬಾವಿಗಳ ಉಪಯೋಗವು ಹೆಚ್ಚಾಗಿ ಆಗುತ್ತದೆ. ಆದರೆ ಇತ್ತಲಾಗಿ ಶಾರದಾ ಹೊಳೆಗೆ ಬರಮುದೇವದ ಹತ್ತರ ಅಣೆಕಟ್ಟನ್ನು ಕಟ್ಟಿ, ಅಲ್ಲಿಂದ ಲಖನೌದವರೆಗೆ ಕಾಲುವೆಯನ್ನು ತಂದಿದ್ದಾರೆ. ಇದರಿಂದ ಪೂರ್ವ ದಂಡೆಯ ಕಾಲುವೆ, ಆಗ್ರಾ ಕಾಲುವೆ, ಹರಿದ್ವಾರದಿಂದ ಹೊರಡುವ ಗಂಗೆಯ ಕಾಲುವೆ, ಕಾನಪೂರದ ಮೇಲಿಂದ ಹಾಯುವ ಕಾಲುವೆ ಮುಂತಾದ ಮಹತ್ವವಾದ ಕಾಲುವೆಗಳಾಗಿರುತ್ತವೆ. ಈ ಕಾಲುವೆಗಳ ನೀರಿನಿಂದ ವರುಷದೊಳಗೆ ಎರಡು ಬೆಳೆಗಳನ್ನು ಬೆಳೆಯುತ್ತಾರೆ. ಈ ಭಾಗದೊಳಗಿನ ಬಹುತರವಾಗಿ ಎಲ್ಲ ಭೂಮಿಯನ್ನು ಸಾಗುಮಾಡಿದ್ದಾರೆ. ಹಿಂಗಾರಿಯಲ್ಲಿ ಗೋದಿ ಮತ್ತು ಕಡಲೆ ಚನ್ನಾಗಿ ಬರುತ್ತವೆ. ಪೂರ್ವಭಾಗದಲ್ಲಿ ಮಳೆಯ ಪ್ರಮಾಣವು ಹೆಚ್ಚಾಗಿರುವದರಿಂದ ಅಲ್ಲಿ ಭತ್ತವು ಬೆಳೆಯುತ್ತದೆ. ಆದರೆ ಪಶ್ಚಿಮ ಭಾಗದಲ್ಲಿ ಮಾತ್ರ ಭತ್ತವು ಬೆಳೆಯುವದಿಲ್ಲ. ಗೋದಿ ಮತ್ತು ಜವೆಗೋದಿಗಳೇ ಅಲ್ಲಿಯ ಮುಖ್ಯ ಬೆಳೆಗಳು. ಮುಂಗಾರಿಯಲ್ಲಿ ಜೋಳ ಮತ್ತು ಗೋವಿನ ಜೋಳಗಳು ಬೆಳೆಯುತ್ತದೆ. ಅದರಂತೆ ಸಾಸಿವೆ, ರಾಯಿ (ಚಿಕ್ಕ ಗೋದಿ), ಕುಸಬೆ ಮುಂತಾದ ಎಣ್ಣೆಯ ಕಾಳುಗಳಾದರೂ ಬೆಳೆಯುತ್ತವೆ. ಕಾಲುವೆಯ ನೀರಿನಿಂದ ಕಬ್ಬು ಹೇರಳವಾಗಿ ಬೆಳೆಯುತ್ತದೆ. ದಿಲ್ಲಿ, ಆಗ್ರಾ ಮುಂತಾದ ಕಡಿಮೆ ಮಳೆಯಾಗುವ ಸ್ಥಳದಲ್ಲಿ ಹತ್ತಿಯು ಬೆಳೆಯುತ್ತದೆ. ಗಂಗೆಯ ಕೊಳ್ಳದೊಳಗೆ ಹುಲ್ಲುಗಾವಲುಗಳು ಇರುವದರಿಂದ ಹೈನಿನ ದನಗಳಾದರೂ ಇಲ್ಲಿ ಬಹಳವಾಗಿರುತ್ತವೆ. ಅಲೀಗಡ ಪಟ್ಟಣವು ಬೆಣ್ಣೆಯ ಸಲುವಾಗಿ ಪ್ರಸಿದ್ಧವಾಗಿರುತ್ತದೆ.

ಈ ಪ್ರಾಂತವು ಬೆಳೆಯುಳ್ಳದ್ದಿರುವದರಿಂದ ಇಲ್ಲಿಯ ಜನವಸತಿಯು ಬಹಳ ದಟ್ಟಾಗಿರುತ್ತದೆ. ಬಹು ಜನರ ಮುಖ್ಯ ಉದ್ಯೋಗವು ಒಕ್ಕಲತನ ವಿದ್ದು ಅವರು ಹಳ್ಳಿಗಳಲ್ಲಿಯೇ ವಾಸಿಸುತ್ತಾರೆ. ಇಲ್ಲಿಯ ಒಕ್ಕಲಿಗರಿಗೆ 'ಕಿಸಾನ' ಎಂದೆನ್ನುತ್ತಾರೆ. ಭೂಮಿಗಳು ಬೆಳೆಯುಳ್ಳವುಗಳಾಗಿದ್ದರೂ ಅದರ



ಆಕೃತಿ ೨೪ ಸಂಯುಕ್ತ ಪ್ರಾಂತದೊಳಗಿನ ಕಾಲುವೆಗಳು

ಲಾಭವು ಮಾತ್ರ ಕಿಸಾನರಿಗೆ ಆಗುವದಿಲ್ಲ. ಅವರ ಸ್ಥಿತಿಯು ಬಡತನದ್ದಾಗಿರುತ್ತದೆ. ಅವರ ಮನೆಗಳು ಮಣ್ಣಿನವೇ ಇರುತ್ತವೆ. ಅವರು ಗಿಡಗಳ ಟೊಂಗೆಗಳಿಂದ ಮಾಳಿಗೆಯನ್ನು ಮಾಡಿ, ಅದರ ಮೇಲೆ ಮೇಲುಮುದ್ದಿಯನ್ನು ಹಾಕುತ್ತಾರೆ. ಅದರಂತೆ ಅವುಗಳ ಚಾಪೆಗಳನ್ನು ಹೆಣೆದು ಮೇಲೆ ಕೆಸರು ಸವರಿ, ಒಣಗಿಸಿ ಗೋಡೆಗಳಂತೆ ಉಪಯೋಗಿಸುತ್ತಾರೆ. ಮನೆಯ ಚಪ್ಪರಗಳು ಹಂಚಿನವಿದ್ದು ಇಳಿಜಾರಾಗಿರುತ್ತವೆ. ಪಂಜಾಬಕ್ಕಿಂತಲೂ ಇಲ್ಲಿ ಮಳೆಯು ಹೆಚ್ಚಾಗುವದರಿಂದ ಇಲ್ಲಿಯ ಮನೆಗಳ ಚಪ್ಪರಗಳನ್ನು ಇಳಿಜಾರಾಗಿ ಮಾಡಬೇಕಾಗುತ್ತದೆ. ಚಳಿಗಾಲದಲ್ಲಿ ಚಳಿಯಿಂದ ಕಾಪಾಡಿಕೊಳ್ಳುವದಕ್ಕೆ ಹಾಸಿಗೆಯ ಕೆಳಗೆ ಹುಲ್ಲಿನ ದಪ್ಪಾದ ತರವನ್ನು ಹಾಕುತ್ತಾರೆ. ಅದರಿಂದ ಬೆಚ್ಚಗಾಗು

ತ್ತದೆ. ಸದಕದ ಹಿಟ್ಟು, ಅವಲಕ್ಕಿ, ಅರಳು ಇವೇ ಅವರ ಮುಖ್ಯವಾದ ಆಹಾರಗಳು. ಕ್ವಚಿತ್ತಾಗಿ ಅನ್ನವನ್ನೂ ಬೇಳೆ-ಚಪಾತಿಗಳನ್ನೂ ಅವರು ತಿನ್ನುತ್ತಾರೆ.

೫೦ ಸಾವಿರಕ್ಕಿಂತಲೂ ಹೆಚ್ಚಾದ ಜನಸಂಖ್ಯೆಯುಳ್ಳ ಹದಿನೇಳು ಪಟ್ಟಣಗಳು ಈ ಪ್ರಾಂತದಲ್ಲಿ ಇರುತ್ತವೆ. ಆಗ್ರಾ ಪಟ್ಟಣದೊಳಗಿನ ಅರಿವೆಯ ಗಿರಣಿಗಳು, ಕಾನಪೂರದೊಳಗಿನ ಚರ್ಮದ ಮತ್ತು ಉಣ್ಣೆಯ ಕಾರಖಾನೆಗಳು ಮತ್ತು ಪಶ್ಚಿಮ ಭಾಗದಲ್ಲಿರುವ ಸಕ್ಕರೆಯ ಕಾರಖಾನೆಗಳು ಇಲ್ಲಿಯ ಮುಖ್ಯವಾದ ಉದ್ಯೋಗ ವ್ಯವಸಾಯಗಳಾಗಿರುತ್ತವೆ. ಮುಖ್ಯ ಪಟ್ಟಣಗಳೆಲ್ಲ ಬಹುಶಃ ಕ್ಷೇತ್ರದ ಸ್ಥಳಗಳೇ ಆಗಿರುತ್ತವೆ. ಹಿಂದೂ ಜನರು ಗಂಗಾ ನದಿಯು ಪವಿತ್ರವಾದದ್ದೆಂದು ಎಣಿಸುತ್ತಾರೆ. ಅದರಲ್ಲಿ ಜಳಕ ಮಾಡಲಿಕ್ಕೆ ಹಿಂದುಸ್ಥಾನದ ಎಲ್ಲ ಪ್ರಾಂತಗಳಿಂದಲೂ ಸಾವಿರಾರು ಜನರು ಪ್ರತಿವರುಷ ಇಲ್ಲಿ ಬರುತ್ತಾರೆ. **ಹರಿದ್ವಾರದ** ಹತ್ತರ ಗಂಗಾ ನದಿಯು ಹಿಮಾಲಯವನ್ನು ಬಿಟ್ಟು ಬೈಲು ಪ್ರದೇಶವನ್ನು ಸೇರುತ್ತದೆ. ಇಲ್ಲಿ ಪ್ರತಿ ವರುಷ ದೊಡ್ಡ ಜಾತ್ರೆಯಾಗುತ್ತದೆ. ಯಮುನೆಯ ದಡದಲ್ಲಿರುವ **ಮಥುರಾ** ಪಟ್ಟಣವು ಶ್ರೀ ಕೃಷ್ಣನ ಜನ್ಮಸ್ಥಾನವೆಂದು ಪ್ರಸಿದ್ಧವಾಗಿರುತ್ತದೆ. ಅಲಹಾಬಾದದ ಹತ್ತರ ಗಂಗಾ-ಯಮುನೆಗಳ ಸಂಗಮದ ಹತ್ತರ ಪ್ರಯಾಗ ತೀರ್ಥವಿರುತ್ತದೆ. **ಬನಾರಸ** ಪಟ್ಟಣವು ಸಂಸ್ಕೃತ ವಿದ್ಯೆಯ ತವರುಮನೆಯೆಂದು ಪ್ರಸಿದ್ಧವಿದೆ. ಬನಾರಸ, ಲಖನೌ, ಅಲೀಗಡ, ಅಲಹಾಬಾದ ಮತ್ತು ಕಾನಪೂರಗಳಲ್ಲಿಯ ವಿದ್ಯಾಪೀಠಗಳು ಪ್ರಸಿದ್ಧವಾಗಿರುತ್ತವೆ. ಜಗತ್ಪ್ರಸಿದ್ಧವಾದ 'ತಾ ಜ ಮ ಹಾ ಲ' ಎಂಬ



ಆಕೃತಿ ೨೫ ಕಬ್ಬು

ಕಟ್ಟಡವು **ಆಗ್ರಾ** ಪಟ್ಟಣದಲ್ಲಿರುತ್ತದೆ. ನೈನೀತಾಲ ಎಂಬ ತಂಪು ಹವೆಯ ಸ್ಥಳವು ಹಿಮಾಲಯದ ಮೇಲೆ ಇರುತ್ತದೆ. ಮೀರತ, ಮುರಾದಾಬಾದ, ಬರೇಲಿ, ರಾಮಪೂರ ಮುಂತಾದ ಪಟ್ಟಣಗಳು ಇತ್ತಲಾಗಿ ಬೆಳೆಯಹತ್ತಿವೆ.

ಈ ಪ್ರಾಂತದೊಳಗೆ ಹಿಮಾಲಯದ ಇಳುಕಲಿನ ಮೇಲಿನ ಕೆಲ ಗುಡ್ಡಗಾಡು ಪ್ರದೇಶವು ಮತ್ತು ತರಾಯಿ ಎಂಬ ಜೌಳು ಪ್ರದೇಶವು ಬರುತ್ತವೆ.



ಆಕೃತಿ ೨೬ ಹರಿದ್ವಾರ ಕುಂಭಮೇಳಾ

ಪರ್ವತದ ಅಡಿಯಲ್ಲಿರುವ ಜೌಳು ಪ್ರದೇಶಕ್ಕೆ **ತರಾಯಿ** ಎಂದೆನ್ನುತ್ತಾರೆ. ಹಿಮಾಲಯದ ಇಳುಕಲಿನ ಮೇಲೆ ಚಹದ ತೋಟಗಳಿರುತ್ತವೆ. ಇದಲ್ಲದೇ ಗುಡ್ಡಗಾಡು ಪ್ರದೇಶದೊಳಗೆ ದಟ್ಟಾದ ಹಳವುಗಳಿದ್ದು, ಪ್ರತಿವರುಷ ಅಲ್ಲಿಂದ ಸಾಕಷ್ಟು ಕಟ್ಟಿಗೆಯು ದೊರೆಯುತ್ತದೆ. **ಡೆಹರಾಡೂನ** ಎಂಬಲ್ಲಿ ಸರಕಾರದ ಪ್ರಯೋಗಶಾಲೆಯಿದ್ದು ಅಲ್ಲಿ ಕಟ್ಟಿಗೆಗಳ ಮೇಲೆ ಬೇರೆ ಬೇರೆ ಪ್ರಯೋಗಗಳನ್ನು ಮಾಡುತ್ತಾರೆ.

## ಪ್ರಶ್ನೆಗಳು

೧. ದಿಲ್ಲಿ ಪಟ್ಟಣಕ್ಕೆ ಭೌಗೋಲಿಕ ಮಹತ್ವವು ಏಕೆ ಬಂದಿದೆ?
೨. ಸಂಯುಕ್ತ ಪ್ರಾಂತದ ಹವಾಮಾನವನ್ನು ವರ್ಣಿಸಿ ಅಲ್ಲಿಯ ಮುಖ್ಯವಾದ ಹುಟ್ಟುವಳಿಗಳನ್ನು ಹೇಳಿರಿ.
೩. 'ಕಿಸಾನ' ಅಂದರೆ ಯಾರು? ಅವರ ಜೀವನದ ವರ್ಣನೆಯನ್ನು ಮಾಡಿರಿ.
೪. ಕೆಳಗೆ ಕೊಟ್ಟ ಪಟ್ಟಣಗಳು ಯಾತರ ಸಲುವಾಗಿ ಪ್ರಸಿದ್ಧ ಅವೆ?
ಬನಾರಸ, ಆಗ್ರಾ, ಅಲೀಗಡ, ಕಾನಪೂರ, ಡೆಹರಾಡೂನ, ನೈನೀತಾಲ.
೫. ಕೆಳಗೆ ಕೊಟ್ಟವುಗಳ ಮೇಲೆ ಟಿಪ್ಪಣಿ ಬರೆಯಿರಿ:
ಅ) ಕುಂಭಮೇಳಾ. ಬ) ತರಾಯಿ. ಕ) ಹೊಸದಿಲ್ಲಿ.

ಪಾಠ ೧೧

## ಬಿಹಾರ

ಗಂಗೆಯ ಕೊಳ್ಳದ ಮಧ್ಯಭಾಗವೇ ಬಿಹಾರ ಪ್ರಾಂತವು. ಈ ಪ್ರಾಂತ ದೊಳಗೆ ಸಂಯುಕ್ತ ಪ್ರಾಂತಕ್ಕಿಂತಲೂ ಹೆಚ್ಚಿಗೆ ಮಳೆಯಾಗುತ್ತದೆ. ಉತ್ತರಕ್ಕೆ ನೇಪಾಳ, ದಕ್ಷಿಣಕ್ಕೆ ಛೋಟಾ ನಾಗಪೂರದ ತಪ್ಪಲು ಇವುಗಳ ನಡುವೆ ಈ ಪ್ರಾಂತವಿರುತ್ತದೆ. ಇದರ ಹವಾಮಾನವು ಸಂಯುಕ್ತ ಪ್ರಾಂತದಷ್ಟು ವಿಷಮ ವಾಗಿರುವದಿಲ್ಲ. ಆದರೂ ಚಳಿಗಾಲದಲ್ಲಿ ಚಳಿಯು ಸಾಕಷ್ಟು ಇರುತ್ತದೆ. ಜೂನದಿಂದ ಸಪ್ಟೆಂಬರದವರೆಗೆ ಮಳೆಗಾಲವಿರುತ್ತದೆ. ಈ ಪ್ರಾಂತದೊಳಗೆ ಗಂಗಾ ನದಿಯ ಉತ್ತರಕ್ಕೆ ಬೈಲು ಪ್ರದೇಶವಿರುತ್ತದೆ. ಗೋಗ್ರಾ, ಗಂಡಕೀ ಮುಂತಾದ ಗಂಗೆಗೆ ಕೂಡುವ ಹೊಳೆಗಳು ಈ ಬೈಲಿನಲ್ಲಿಯೇ ಹರಿಯುತ್ತವೆ. ಗಂಗಾ ಹೊಳೆಯ ದಕ್ಷಿಣಕ್ಕೆ ಉತ್ತರಕ್ಕಿಂತಲೂ ಮಳೆಯು ಕಡಿಮೆಯಾಗುತ್ತದೆ. ಆದರೆ ಗಂಗಾ ನದಿಯ ಶಾಖಾ ನದಿಯಾದ ಶೋಣ ಹೊಳೆಯಿಂದ ಕಾಲುವೆ ಗಳನ್ನು ಆಗಿದು ನೀರಿನ ಸೌಕರ್ಯವನ್ನು ಒದಗಿಸಿಕೊಟ್ಟಿದ್ದಾರೆ.

ಬಿಹಾರ ಪ್ರಾಂತದೊಳಗಿನ ಭೂಮಿಯು ರೇವೆಯಿಂದಲೇ ಉಂಟಾದ್ದ ರಿಂದ ಬೆಳೆಯುಳ್ಳದ್ದಾಗಿರುತ್ತದೆ. ಪ್ರಾಂತದೊಳಗಿನ ಮೂರು ನಾಲ್ಕಾಂಶ ಪಾಲು ಭೂಮಿಯು ಸಾಗಾಗಿದೆ. ಇಲ್ಲಿಯ ಜನವಸತಿಯಾದರೂ ದಟ್ಟಾಗಿರು ತ್ತದೆ. ಮುಖ್ಯ ಬೆಳೆಯು ಭತ್ತವು. ಯಾಕಂದರೆ ೪೦ ಇಂಚಿಗಿಂತ ಹೆಚ್ಚು

ಮಳೆಯಾಗುತ್ತದೆ. ಭತ್ತದ ಹೊರತಾಗಿ ಎಳ್ಳು, ಸಾಸಿವೆ ಮುಂತಾದ ಎಣ್ಣೆ ಕಾಳುಗಳು ಬೆಳೆಯುತ್ತವೆ. ಪೂರ್ವಕಾಲದಲ್ಲಿ ಇಲ್ಲಿ ನೀಲಿಯು ಬಹಳವಾಗಿ




ಆಕೃತಿ ೨೭ ಬಿಹಾರ ಪ್ರಾಂತ

ಬೆಳೆಯುತ್ತಿತ್ತು. ಆದರೆ ಕೃತ್ರಿಮ ನೀಲಿಯು ಬರಹತ್ತಿದ್ದರಿಂದ ಇದರ ಬೆಳೆಯು ಕಡಿಮೆಯಾಯಿತು. ಅದರಂತೆ ಅಫು ಆದರೂ ಹೇರಳವಾಗಿ ಬೆಳೆಯುತ್ತಿತ್ತು. ಈ ಅಫುವು ಚೀನಕ್ಕೆ ರಫ್ತಾಗುತ್ತಿತ್ತು. ಆದರೆ ಚೀನೀ ಸರಕಾರವು ಅಫುವಿನ

ವ್ಯಾಪಾರವನ್ನು ತಡೆದದ್ದರಿಂದ ಈ ಪ್ರಾಂತದೊಳಗಿನ ಅಫುವಿನ ಬೆಳೆಯು ಕಡಿಮೆಯಾಯಿತು. ಇತ್ತಿತ್ತಲಾಗಿ ಈ ಪ್ರಾಂತದಲ್ಲಿ ಬಟಾಟೆಯ ಬೆಳೆಯು ಹೆಚ್ಚಾಗಹತ್ತಿದೆ. ಮಳೆಯ ಪ್ರಮಾಣವು ಕಡಿಮೆ ಇದ್ದ ಸ್ಥಳಗಳಲ್ಲಿ ಗೋದಿಯು ಬೆಳೆಯುತ್ತದೆ.


ಆಕೃತಿ ೨೮ ಅಫುವಿನ ಕಾಯಿ

ಈ ಪ್ರಾಂತದೊಳಗೆ ಜನವಸತಿಯು ದಟ್ಟಾಗಿರುವದರಿಂದ, ಎಲ್ಲರಿಗೂ ಒಕ್ಕಲತನ ಮಾಡಲಿಕ್ಕೆ ಆಗುವದಿಲ್ಲ. ಆದ್ದರಿಂದ ಹೊಟ್ಟೆತುಂಬಿಕೊಳ್ಳಲಿಕ್ಕೆ ಎಷ್ಟೋ ಜನರು ಪರಪ್ರಾಂತಗಳಿಗೆ ಕೆಲಸಕ್ಕೆ ಹೋಗುತ್ತಾರೆ. ಚಹದ ತೋಟದೊಳಗೆ ದುಡಿಯಲಿಕ್ಕೆ ಎಷ್ಟೋ ಬಿಹಾರಿ ಕೂಲಿಕಾರರು ಆಸಾಮಕ್ಕೆ ಹೋಗುತ್ತಾರೆ. ಮತ್ತು ಅವರೊಳಗೆ ಹಲವರು ಅಲ್ಲಿಯೇ ವಾಸಮಾಡುತ್ತಾರೆ. ಬೇರೆ ಕೆಲವರು ಕಲಕತ್ತೆಗೆ ಬಂದರಗಳಲ್ಲಿ ದುಡಿಯಲಿಕ್ಕೂ, ಗೋಣಿಯ ಗಿರಣಿಗಳಲ್ಲಿ ಕೆಲಸ ಮಾಡಲಿಕ್ಕೂ ಹೋಗುತ್ತಾರೆ. ಈ ಜನರು ಮಾತ್ರ ಎಂಟು ತಿಂಗಳವರೆಗೆ ಕೆಲಸ ಮಾಡಿ ಮಳೆಗಾಲ ಬಂದ ಕೂಡಲೇ ತಿರುಗಿ ತಮ್ಮ ತಮ್ಮ ಮನೆಗೆ ಹೋಗುತ್ತಾರೆ. ಅದರಂತೆ ಎಷ್ಟೋ ಕೂಲಿಕಾರರು ಈಗ ಟಾಟಾನಗರಕ್ಕೆ ಉಕ್ಕಿನ ಕಾರಖಾನೆಗಳಲ್ಲಿಯೂ, ಕಲ್ಲಿದ್ದಲಿಯ ಕಣಿಗಳಲ್ಲಿಯೂ ಕೆಲಸಮಾಡಲಿಕ್ಕೆ ಹೋಗಹತ್ತಿದ್ದಾರೆ.

ಈ ಪ್ರಾಂತದೊಳಗಿನ ಒಕ್ಕಲಿಗರು ಬಡವರಾಗಿರುತ್ತಾರೆ ಸಂಯುಕ್ತ ಪ್ರಾಂತದಂತೆಯೇ ಇಲ್ಲಿಯ ಮನೆಗಳನ್ನಾದರೂ ಮಣ್ಣಿನಿಂದಲೇ ಕಟ್ಟುತ್ತಾರೆ. ಒಕ್ಕಲಿಗರ ಉಡುಪುಗಳಾದರೂ ತೀರ ಸಾದಾ ಇರುತ್ತವೆ. ದೋತರವನ್ನು ಉಟ್ಟುಕೊಂಡು ಮೈಯಲ್ಲಿ ಕಬಚಿಯನ್ನು ಹಾಕಿಕೊಳ್ಳುತ್ತಾರೆ. ಹೆಗಲ ಮೇಲೆ ಒಂದು ಸಣ್ಣ ಪಂಚೆ ಇರುತ್ತದೆ. ಅವರು ಭಾವಿಕರಾಗಿರುತ್ತಾರೆ. ತುಳಸೀದಾಸ ರಾಮಾಯಣವನ್ನು ಅನ್ನುತ್ತ ಕೆಲಸಮಾಡುತ್ತಿರುತ್ತಾರೆ. ಈ ಪ್ರಾಂತದೊಳಗೆ ದಸರೆಯ ದಿವಸ ರಾಮಲೀಲಾ ಮತ್ತು ಶ್ರಾವಣ ಮಾಸದಲ್ಲಿ ಕೃಷ್ಣಜನ್ಮದ ಉತ್ಸವಗಳನ್ನು ಬಹು ದೊಡ್ಡ ಪ್ರಮಾಣದಿಂದ ಮಾಡುತ್ತಾರೆ.

ಈ ಪ್ರಾಂತದ ದಕ್ಷಿಣ ಭಾಗವೆಂದರೆ ಛೋಟಾ ನಾಗಪೂರದ ತಪ್ಪಲು ಭೂಮಿಯೇ ಆಗಿರುತ್ತದೆ. ಈ ಗುಡ್ಡಗಾಡು ಪ್ರದೇಶದಲ್ಲಿಯೂ, ದಾಮೋದರ

ಹೊಳೆಯ ಕೊಳ್ಳದಲ್ಲಿಯೂ ಖನಿಜಸಂಪತ್ತಿಯು ವಿಪುಲವಾಗಿರುತ್ತದೆ. **ರಾಣೀಗಂಜ, ಗಿರಧೀ, ಝೂರಿಯಾ** ಮುಂತಾದ ಭಾಗಗಳಲ್ಲಿ ಕಲ್ಲಿದ್ದಲಿಯು ಹೇರಳವಾಗಿ ಸಿಗುತ್ತದೆ. ನೂರು ಫೂಟು ದಪ್ಪಾದ ಕಲ್ಲಿದ್ದಲಿಯ ತರಗಳು ಈ ಭಾಗದಲ್ಲಿರುತ್ತವೆ. ಜಮಸೇಡಪೂರದಲ್ಲಿಯೂ ಮತ್ತು ಅದರ ಸುತ್ತುಮುತ್ತಲೂ ಕಬ್ಬಿಣ-ಉಕ್ಕುಗಳ ಕಾರಖಾನೆಗಳು ಆದಂದಿನಿಂದ ಝೂರಿಯಾದೊಳಗಿನ



ಆಕೃತಿ ೨೯ ಕಲ್ಲಿದ್ದಲಿಯ ಕಣಿಯ ಒಳನೋಟವು

ಇದ್ದಲಿಯು ಅಲ್ಲಿಯೇ ಉಪಯೋಗ ಆಗಹತ್ತಿದೆ. ಕಾಲಿಮತೀ, ಗುರುಮಹಿಮಾನಿ, ನೌಮುಂದಿ ಮುಂತಾದ ಭಾಗಗಳಲ್ಲಿ ಕಬ್ಬಿಣದ ಅದರು ಸಿಗುತ್ತದೆ. ಹಜಾರಿಭಾಗದ ಹತ್ತರ ಅಭ್ರಕದ ಕಣಿಗಳಿರುತ್ತವೆ. ಅದನ್ನು ಉಕ್ಕು ತಯಾರಿಸುವದರಲ್ಲಿ ಉಪಯೋಗಿಸುತ್ತಾರೆ. **ಜಮಸೇಡಪೂರ**ದಲ್ಲಿ ಮೇಲಾದ ಉಕ್ಕು ತಯಾರಾಗುತ್ತದೆ. ರೇಲು ಹಳಿಗಳನ್ನೂ ಪತ್ರಾಸುಗಳನ್ನೂ ಅಲ್ಲಿ ತಯಾರಿಸುತ್ತಾರೆ. ಇತ್ತಲಾಗಿ ಯಂತ್ರಗಳನ್ನು ತಯಾರಿಸುವ ಕಾರಖಾನೆಗಳು ಸಹ ಆಗಿರುತ್ತವೆ. ದಾಮೋದರ ಹೊಳೆಗೆ ಅಣೆಕಟ್ಟನ್ನು ಕಟ್ಟಿ, ಈ ಕೊಳ್ಳದೊಳಗಿನ ಬಹು ಭಾಗವನ್ನು ಸಾಗುಮಾಡುವ ಪ್ರಚಂಡವಾದ ಒಂದು ಯೋಜನೆಯನ್ನು

ಸರಕಾರದವರು ಮಾಡಿರುವರು. ಅದರಂತೆ ಈ ಅಣೆಕಟ್ಟಿನಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ ಎಷ್ಟೋ ಯಂತ್ರಗಳ ಕಾರಖಾನೆಗಳನ್ನು ನಡೆಯಿಸಲಿಕ್ಕೆ ಸುಲಭವಾಗಬಹುದು.

ಬಿಹಾರ ಪ್ರಾಂತದೊಳಗೆ **ಪಾಟಣಾ** ಎಂಬದು ಮುಖ್ಯವಾದ ಪಟ್ಟಣವೂ ವ್ಯಾಪಾರದ ಸ್ಥಳವೂ ಆಗಿರುತ್ತದೆ. ಈ ಪ್ರಾಂತದೊಳಗೆ ಬೆಳೆಯುವ ಒಂದು



ಆಕೃತಿ ೩೦ ಜಮಸೇಡಪುರ

ಮೇಲಾದ ಜಾತಿಯ ಅಕ್ಕಿಗೆ 'ಪಾಟಣಾದ ಅಕ್ಕಿ' ಎಂದೆನ್ನುತ್ತಾರೆ. **ಗಯಾ** ಎಂಬದು ಪ್ರಸಿದ್ಧ ಕ್ಷೇತ್ರವಾಗಿದ್ದು ಹತ್ತರದಲ್ಲಿಯೇ ಬುದ್ಧ–ಗಯಾ ಎಂಬ ದೇವಸ್ಥಾನ ಉಂಟು. ಯಾವ ಬಸರೀ ಗಿಡದ ಕೆಳಗೆ ಕುಳಿತಾಗ ಗೌತಮ ಬುದ್ಧನಿಗೆ ಆತ್ಮ ಜ್ಞಾನವಾಯಿತೋ ಆ ಬಸರೀ ಗಿಡವನ್ನು ಈಗಲೂ ಅಲ್ಲಿ ಕಾಣಬಹುದು. ಬೌದ್ಧ ಧರ್ಮ ಯಾತ್ರಿಕರು ಪ್ರತಿವರುಷ ಇಲ್ಲಿ ಬಂದು ಹೋಗುತ್ತಾರೆ. ಗೋಗ್ರಾ ಮತ್ತು ಗಂಗಾ ಇವುಗಳ ಸಂಗಮದ ಮೇಲಿರುವ **ಛಪ್ರಾ** ಎಂಬ ಪಟ್ಟಣವು ಗಂಗಾ ನದಿಯ ದಂಡೆಯ ಮೇಲಿನ ಪ್ರಸಿದ್ಧವಾದ

ಬಂದರವಾಗಿರುತ್ತದೆ. ಇಲ್ಲಿಂದ ನೆಟ್ಟಗೆ ಮುಖದ ವರೆಗೆ ಬರುಹೋಗುವದಕ್ಕಾಗಿ ಈ ಹೊಳೆಯು ಉಪಯೋಗವಾಗುತ್ತದೆ. ಭಾಗಲಪೂರ, ದರಭಂಗಾ, ಮುಜಫರಪೂರ ಮುಂತಾದ ಪಟ್ಟಣಗಳಾದರೂ ಪ್ರಸಿದ್ಧವಾಗಿರುತ್ತವೆ.

## ಪ್ರಶ್ನೆಗಳು

೧. ಬಿಹಾರ ಪ್ರಾಂತದ ಹವಾಮಾನವನ್ನೂ ಅಲ್ಲಿಯ ಹುಟ್ಟುವಳಿಗಳನ್ನೂ ಹೇಳಿರಿ.
೨. ಬಿಹಾರೀ ಕೂಲಿಕಾರರು ಪ್ರಾಂತದ ಹೊರಗೆ ಎಲ್ಲಿ ಹೋಗುತ್ತಾರೆ? ಮತ್ತು ಯಾಕೆ ಹೋಗುತ್ತಾರೆ?
೩. ಛೋಟಾ ನಾಗಪೂರದ ತಪ್ಪಲಿಗೆ ಮಹತ್ವವು ಯಾಕೆ ಬಂದಿದೆ?
೪. ಕೆಳಗೆ ಕೊಟ್ಟ ಪಟ್ಟಣಗಳು ಯಾತರ ಸಲುವಾಗಿ ಪ್ರಸಿದ್ಧ ಅವೆ?
ಅ) ಪಾಟಣಾ. ಬ) ಜಮಸೇಡಪೂರ. ಕ) ಛಪ್ರಾ. ಡ) ಝರಿಯಾ. ಇ) ಗಯಾ.
೫. ದಾಮೋದರ ಯೋಜನೆಯಿಂದಾಗುವ ಲಾಭಗಳು ಯಾವವು?
೬. ಬಿಹಾರದ ಒಕ್ಕಲಿಗನ ಜೀವನವನ್ನು ವರ್ಣಿಸಿರಿ.

ಪಾಠ ೧೨

## ಬಂಗಾಲ

ರಾಜಮಹಾಲ ಗುಡ್ಡಗಳನ್ನು ಸುತ್ತಿಕೊಂಡು ಗಂಗಾನದಿಯು ದಕ್ಷಿಣಕ್ಕೆ ತಿರುಗಿ ಬಂಗಾಲದ ಉಪಸಾಗರಕ್ಕೆ ಕೂಡುತ್ತದೆ. ಹಿಮಾಲಯದ ಅಡಿಯಿಂದ ಬಂಗಾಲದ ಉಪಸಾಗರದವರೆಗೆ ಬಂಗಾಲಪ್ರಾಂತವು ಪಸರಿಸಿರುತ್ತದೆ. ಮೊದಲು ಗಂಗಾ-ಬ್ರಹ್ಮಪುತ್ರಾ ಹೊಳೆಗಳ ಮುಖಗಳ ಹತ್ತರದ ಪ್ರದೇಶವನ್ನೊಳಗೊಂಡು ಒಂದೇ ಪ್ರಾಂತವಾಗಿತ್ತು. ಆದರೆ ೧೯೪೭ನೇ ಇಸವಿಯಲ್ಲಿ ಪೂರ್ವ ಭಾಗವು ಪಾಕಿಸ್ತಾನಕ್ಕೆ ಸೇರಿತು. ಮತ್ತು ಪಶ್ಚಿಮ ಕಡೆಯ ಭಾಗವು ಹಿಂದುಸ್ಥಾನದಲ್ಲಿ ಉಳಿಯಿತು. ಈ ಭಾಗಕ್ಕೆ ಈಗ ಪಶ್ಚಿಮ ಬಂಗಾಲ ಪ್ರಾಂತವೆಂದೆನ್ನುತ್ತಾರೆ. ಗಂಗಾ ನದಿಯ ಶಾಖೆಯಾದ ಹುಗಳೀ ಹೊಳೆಯ ಕೊಳ್ಳವು ಮತ್ತು ಹುಗಳೀ ಮತ್ತು ದಾಮೋದರ ಹೊಳೆಗಳ ನಡುವಿನ ಪ್ರದೇಶವು ಈ ಪ್ರಾಂತದೊಳಗೆ ಬರುತ್ತದೆ.

ಬಂಗಾಲ ಪ್ರಾಂತವೆಲ್ಲ ಸಪಾಟಾಗಿದ್ದು ಸಮುದ್ರ ಸಪಾಟಿಯಿಂದ ಎತ್ತರವಾಗಿರುವದಿಲ್ಲ. ತೀರ ಉತ್ತರಕ್ಕಿರುವ ದಾರ್ಜಿಲಿಂಗ ಜಿಲ್ಲೆಯು ಮಾತ್ರ ಗುಡ್ಡಗಾಡು ಇರುತ್ತದೆ. ಬಂಗಾಲದ ಉಪಸಾಗರದ ಮೇಲಿನಿಂದ ಬರುವ ಮನ್ಸೂನ ಗಾಳಿಯ ಟಿಸಿಲು ಮೊಟ್ಟಮೊದಲು ಬಂಗಾಲವನ್ನು ಸೇರುತ್ತದೆ. ಆದ್ದರಿಂದ ಈ ಪ್ರಾಂತದೊಳಗೆ ಮಳೆಯು ಸಾಕಷ್ಟು ಆಗುತ್ತದೆ. ಇಲ್ಲಿಯ ಹವೆಯು




ಆಕೃತಿ ೩೧ ಬಂಗಾಲ

ಕುಂದಾ (ಆರ್ದ್ರತೆಯುಳ್ಳ) ಗಿರುತ್ತದೆ. ಫೇಬ್ರುವರಿಯಿಂದ ಆಕ್ಟೋಬರದ ವರೆಗೆ ಸಮುದ್ರದ ಮೇಲಿನ ಆರ್ದ್ರ ಗಾಳಿಗಳು ಬೀಸುತ್ತವೆ. ಮಾರ್ಚ ಮತ್ತು ಎಪ್ರಿಲ ತಿಂಗಳುಗಳಲ್ಲಿ ಬಿರುಗಾಳಿಗಳು ಬೀಸುವದರಿಂದ ಮಳೆಯಾಗುತ್ತದೆ. ಮಳೆಗಾಲದಲ್ಲಿ ಹೊಳೆಗಳು ತುಂಬಿ ಹರಿಯಲಾರಂಭಿಸಿದವೆಂದರೆ, ನೋಡಿದತ್ತೆಲ್ಲ ನೀರೇ ನೀರಾಗುತ್ತದೆ. ಆಗ ಹಳ್ಳಿಯಿಂದ ಹಳ್ಳಿಗೆ ಹೋಗಬೇಕಾದರೆ ಡೋಣಿಗಳೊಳಗಿಂದಲೇ ಹೋಗಬೇಕಾಗುತ್ತದೆ. ಗಂಗಾ ಹೊಳೆಯು ಗುಂಟ ಪ್ರತಿ ವರುಷ ಬರುವ ರೇವೆಯಿಂದ ಭೂಮಿಯು ಫಲವತ್ತಾಗಿರುತ್ತದೆ.

ಸಾಕಷ್ಟು ಮಳೆ, ಉಷ್ಣವಾದ ಆರ್ದ್ರ ಹವೆ, ಮತ್ತು ಬೆಳೆಯುಳ್ಳ ಭೂಮಿ ಇವುಗಳಿಂದ ಒಕ್ಕಲಿಗನು ಇಡೀ ವರುಷದಲ್ಲೆಲ್ಲ ಕೆಲಸದಲ್ಲಿ ತೊಡಗಿರುತ್ತಾನೆ. ವರುಷದಲ್ಲಿ ಮೂರು ಬೆಳೆಗಳು ಬರುತ್ತವೆ. ಗೋಣಿ ಮತ್ತು ಭತ್ತ ಇವು ಬಹು ದೊಡ್ಡ ಪ್ರಮಾಣದಿಂದ ಬೆಳೆಯುತ್ತವೆ. ಹಿಂಗಾರಿಯ ಸುಗ್ಗಿಯು



ಆಕೃತಿ ೩೨ ಸಣಬು ಕೊಯ್ಯುವದು

ಮುಗಿದ ಕೂಡಲೇ ಒಕ್ಕಲಿಗನು ನೆಲವನ್ನು ಹರಗಿ ಮಳೆಗಾಲದ ಆರಂಭಕ್ಕೆ ಭತ್ತ ಮತ್ತು ಸಣಬುಗಳನ್ನೂ ಬಿತ್ತುತ್ತಾನೆ. ಇದು ಮುಂಗಾರಿಯ ತತಿಯು. ಶ್ರಾವಣ ಮಾಸದ ಸುಮಾರಿಗೆ ಈ ಬೆಳೆಗಳು ಬರುತ್ತವೆ. ಈಗ ಮಳೆಯ ಸರುವುಗಳು ಇದ್ದೇ ಇರುತ್ತವೆ. ನಡುವೆ ಮಳೆ ನಿಂತಾಗ ಬೆಳೆ ಕೊಯ್ದು ಮನೆಯಲ್ಲಿಯೇ ಬಡಿದು ರಾಶೀ ಮಾಡಬೇಕಾಗುತ್ತದೆ. ಭತ್ತದ ರಾಶಿಯಾದ ಕೂಡಲೇ ಸಣಬನ್ನೂ ಕೊಯ್ಯಹತ್ತುತ್ತಾರೆ. ಜೊಡ್ಡಿಗೆ ಹತ್ತಿ ಸಣಬು ಕೊಯ್ದು

ಸಿವುಡುಗಳನ್ನು ಕಟ್ಟಿ ಕೆಲವು ದಿವಸಗಳವರೆಗೆ ಹೊಲದಲ್ಲಿಯೇ ಇಡುತ್ತಾರೆ. ಅಲ್ಲಿ ಅವುಗಳ ಎಲೆಗಳೆಲ್ಲ ಉದುರಿಬಿದ್ದ ಮೇಲೆ, ಆ ಎಲ್ಲ ಹೊರೆಗಳನ್ನು ಕೆರೆಗಳಲ್ಲಿಯಾಗಲೀ ಹೊಳೆಯಲ್ಲಾಗಲೀ ಕೊಳೆ ಹಾಕುತ್ತಾರೆ. ೧೫-೨೦ ದಿವಸಗಳಾದ ಬಳಿಕ ದೇಟುಗಳ ಮೇಲಿನ ತೋಟೆಯು ಬೇರೆಯಾಗುತ್ತದೆ. ಆ ಮೇಲೆ ಒಕ್ಕಲಿಗನು ನೀರಿನಲ್ಲಿ ನಿಂತು ತೋಟೆಗಳನ್ನೆಲ್ಲ ಕೂಡಿಹಾಕಿ, ಹೊಲದೊಳಗೆ ಕಟ್ಟಿದ ಕೋಲುಗಳ ಮೇಲೆ ಅವುಗಳನ್ನು ಒಣಗಹಾಕುತ್ತಾನೆ. ಸಣಬನ್ನು ಕೊಳೆಯಿಟ್ಟ ಮೇಲೆ ಸಿಗುವ ೧೫-೨೦ ದಿವಸಗಳಲ್ಲಿ, ಒಕ್ಕಲಿಗನು ಭತ್ತದ ಎರಡನೇ ಬೆಳೆಯ ಸಲುವಾಗಿ ಭೂಮಿಯನ್ನು ಸಿದ್ಧಮಾಡುತ್ತಾನೆ. ಈಗ ಸಸಿಗಳನ್ನು ಊರಬೇಕಾಗುತ್ತದೆ. ಮತ್ತು ಈ ಕೆಲಸವು ಬಿತ್ತುವ ಕೆಲಸಕ್ಕಿಂತ ಹೆಚ್ಚು ತ್ರಾಸದಾಯಕವಾದದ್ದಿರುತ್ತದೆ. ಮೊಳಕಾಲು ಮಟ್ಟ ಕೆಸರಿನೊಳಗೆ ನಿಂತು ಎರಡೆರಡೇ ಸಸಿಗಳನ್ನು ಬೇರೆಬೇರೆ ಮಾಡಿ ಹಚ್ಚಬೇಕಾಗುತ್ತದೆ. ಇವುಗಳನ್ನು ಹಚ್ಚಿ ಮುಗಿಸುವದರೊಳಗಾಗಿಯೇ ಒಣಗಲಿಕ್ಕೆ ಇಟ್ಟ ಸಣಬು ಒಣಗಿ ಸಿದ್ಧವಾಗಿರುತ್ತದೆ. ಆ ಮೇಲೆ ಅವುಗಳನ್ನು ಹೊರೆಕಟ್ಟಿ ಮಾರಲಿಕ್ಕೆ ಒಯ್ಯುತ್ತಾನೆ.

ಕಾರ್ತೀಕ ಮಾಸದ ಕೊನೆಯವರೆಗೆ ಭತ್ತದ ಎರಡನೇ ಬೆಳೆಯು ಬರುತ್ತದೆ. ಈಗ ಮಳೆ ಇರುವದಿಲ್ಲ. ಆದ್ದರಿಂದ ಬೆಳೆ ಕೊಯ್ಯುವದೂ ರಾಶೀಮಾಡುವದೂ ಸುಲಭವಾಗಿರುತ್ತದೆ. ಈ ಕೆಲಸವನ್ನು ಮುಗಿಸಿಕೊಂಡು, ಹಿಂಗಾರಿಯ ಸಲುವಾಗಿ ಭೂಮಿಯನ್ನು ಹರಗಿ ಸಿದ್ಧಮಾಡಬೇಕಾಗುತ್ತದೆ. ಹಸಿ ಇರುವಾಗಲೇ ಹರಗಿ ಗೋದಿ, ಕಡಲೆ, ಸಾಸಿವೆ ಮುಂತಾದವುಗಳನ್ನು ಬಿತ್ತುತ್ತಾನೆ. ಮೂರು ತಿಂಗಳಿಗೆ ಈ ಬೆಳೆಗಳು ಬರುತ್ತವೆ. ಉತ್ತರದಲ್ಲಿ ಚಹದ ತೋಟಗಳೂ ಸಿಂಕೋನಾ ಗಿಡಗಳೂ ಬೆಳೆಯುತ್ತವೆ. ಸಿಂಕೋನಾ ಗಿಡದಿಂದ ಕೊಯನೆಲ್ (ಕ್ವಿನಾಯಿನ)ಎಂಬ ಔಷಧವನ್ನು ತಯಾರಮಾಡುತ್ತಾರೆ.

ಒಕ್ಕಲಿಗನು ಇಡೀ ವರುಷದಲ್ಲೆಲ್ಲ ಹೊಲದೊಳಗೆ ದುಡಿಯುತ್ತಿರುತ್ತಾನೆ. ಅಕ್ಕಿ ಮತ್ತು ಮೀನುಗಳೇ ಅವನ ಮುಖ್ಯವಾದ ಆಹಾರಗಳು. ಅವನು ಹೊಲದಲ್ಲಿಯೇ ಮನೆ ಕಟ್ಟಿಕೊಂಡಿರುತ್ತಾನೆ. ಅವನು ಮನೆಯನ್ನು ಮಣ್ಣಿನ ಇಟ್ಟಂಗಿಗಳಿಂದ ಕಟ್ಟಿದ್ದು, ಮೇಲೆ ಪತ್ರಾಸುಗಳನ್ನು ಹಾಕಿರುತ್ತಾನೆ. ಸಂಯುಕ್ತ ಪ್ರಾಂತ ಅಥವಾ ಬಿಹಾರದೊಳಗಿನಂತೆ ಇಲ್ಲಿಯ ಮನೆಗಳು ಒಂದಕ್ಕೊಂದು ಹೊಂದಿಕೊಂಡಿರುವದಿಲ್ಲ. ಕೊಂಕಣದೊಳಗಿನಂತೆ ಅವು ಒಂದರಿಂದೊಂದು ಬೇರೆ ಬೇರೆಯಾಗಿರುತ್ತವೆ.

ಈ ಪ್ರಾಂತದೊಳಗಿನ ಬಹುತರ ಎಲ್ಲ ಜನವಸತಿ ಹಳ್ಳಿಗಳಲ್ಲಿಯೇ ಇರುತ್ತದೆ. ಇಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ತೀರ ತುಸು ಇರುತ್ತವೆ. ಪ್ರಾಂತದ ರಾಜಧಾನಿಯಾದ **ಕಲಕತ್ತಾ** ಪಟ್ಟಣವು ಮಾತ್ರ ಅತಿ ದೊಡ್ಡದಾಗಿರುತ್ತದೆ. ಹಿಂದುಸ್ಥಾನದೊಳಗೆ ಇಷ್ಟು ಜನವಸತಿಯುಳ್ಳ ಬೇರೊಂದು



ಆಕೃತಿ ೩೩ ಹುಗಳೀ ನದಿಯ ನೋಟ

ಪಟ್ಟಣವಿರುವದಿಲ್ಲ. ಈ ಪಟ್ಟಣವು ಸಮುದ್ರದಿಂದ ೭೦ ಮೈಲಿನ ಮೇಲೆ ಹುಗಳೀ ನದಿಯ ದಂಡೆಯ ಮೇಲೆ ಇರುತ್ತದೆ. ಆದರೂ ಹೊಳೆಯ ಪಾತ್ರವು ಸಾಕಷ್ಟು ಅಗಲಾಗಿಯೂ, ಆಳವಾಗಿಯೂ ಇರುವದರಿಂದ, ದೊಡ್ಡ ದೊಡ್ಡ ಉಗಿಹಡಗಗಳು ಕಲಕತ್ತೆಯವರೆಗೆ ಸುಲಭವಾಗಿ ಬರುತ್ತವೆ. ಕಲಕತ್ತೆಯು ಗಂಗಾ ಮತ್ತು ಬ್ರಹ್ಮಪುತ್ರಾ ಹೊಳೆಗಳ ಕೊಳ್ಳಗಳ ಮಹಾದ್ವಾರದಂತೆ ಇರುವದರಿಂದ ಈ ಪಟ್ಟಣಕ್ಕೆ ಬಹಳ ಮಹತ್ವವು ಬಂದಿದೆ. ಈ ಪಟ್ಟಣವು ಹುಗಳೀ ನದಿಯ ಎರಡೂ ತೀರಗಳ ಮೇಲೆ ಹಬ್ಬಿರುತ್ತದೆ. ಈ ಬಂದರದೊಳಗಿಂದ ಚಹ, ಸಣಬು, ಸಣಬಿನ ಅರಿವೆ, ಎಣ್ಣೆಯ ಕಾಳು ಮುಂತಾದವು

ಗಳು ಪರದೇಶಕ್ಕೆ ಹೋಗುತ್ತವೆ. ಹಿಂದುಸ್ಥಾನದ ಇಡೀ ವ್ಯಾಪಾರದ ಅರ್ಧ ದಷ್ಟು ವ್ಯಾಪಾರವು ಇದೊಂದೇ ಬಂದರದೊಳಗಿಂದ ನಡೆಯುತ್ತದೆ. ಸಣಬಿನ ಅರಿವೆಗಳನ್ನು ನೇಯುವ ಎಷ್ಟೋ ಗಿರಣಿಗಳು ಇದೇ ಪಟ್ಟಣದಲ್ಲಿರುತ್ತವೆ.

## ಪ್ರಶ್ನೆಗಳು

೧. ಬಂಗಾಲ ಪ್ರಾಂತದ ಹವಾಮಾನವನ್ನು ವರ್ಣಿಸಿರಿ.
೨. ಬಂಗಾಲದ ಒಕ್ಕಲಿಗನು ಇಡೀ ವರುಷದಲ್ಲೆಲ್ಲ ದುಡಿಯುತ್ತಾನೆ. ಹೇಗೆ?
೩. ಬಂಗಾಲದ ಮುಖ್ಯವಾದ ಹುಟ್ಟುವಳಿಗಳು ಯಾವವು?
೪. ಕಲಕತ್ತೆಯಿಂದ ರಫ್ತಾಗುವ ಸರಕುಗಳು ಯಾವವು?
೫. ಬಂಗಾಲದೊಳಗೆ ಮುಖ್ಯವಾದ ಸುಗ್ಗೀಕಾಲಗಳು ಯಾವವು? ಮತ್ತು ಆಗ ಯಾವ ಬೆಳೆಗಳು ಬರುತ್ತವೆ?

ಪಾಠ ೧೫

## ಆಸಾಮು

ಉತ್ತರಕ್ಕೆ ಹಿಮಾಲಯ ಮತ್ತು ಪೂರ್ವಕ್ಕೆ ನಾಗ, ಲುಶಾಯಿ ಮುಂತಾದ ಪರ್ವತಗಳ ನಡುವೆ ಈ ಪ್ರಾಂತವು ಇದ್ದು ಅದರ ಆಕಾರವು ಲಾಳಿಕೆಯಂತೆ ಇರುತ್ತದೆ. ಬಂಗಾಲದ ಉಪಸಾಗರದ ಮೇಲಿನಿಂದ ಬರುವ ಮನ್ಸೂನ ಗಾಳಿಗಳು ಈ ಸಂದಿಯಲ್ಲಿ ಸೇರಿ, ಅಲ್ಲಿಯ ಗುಡ್ಡಗಳಿಂದ ತಡೆಯಲ್ಪಟ್ಟು ಅಲ್ಲಿ ವಿಪುಲವಾಗಿ ಮಳೆಯನ್ನು ಸುರಿಸುತ್ತವೆ. ಅವುಗಳ ಮುಂದಿನ ದಾರಿಯು ಹಿಮಾಲಯದಿಂದ ತಡೆಯಲ್ಪಡುವದರಿಂದ, ಈ ಗಾಳಿಗಳು ಪಶ್ಚಿಮಕ್ಕೆ ಗಂಗಾ ನದಿಯ ಕೊಳ್ಳದೊಳಗೆ ತಿರುಗುತ್ತವೆ. ಆಸಾಮದೊಳಗೆ ಆಗುವಷ್ಟು ಮಳೆಯು ಇನ್ನೆಲ್ಲಿಯೂ ಆಗುವದಿಲ್ಲ. ಮಾರ್ಚದಿಂದ ಮೇ ತಿಂಗಳಿನವರೆಗೆ ಅಲ್ಲಿ ಸಾಕಷ್ಟು ಮಳೆಯಾಗುತ್ತದೆ. ಇದಲ್ಲದೆ ಮಳೆಗಾಲದಲ್ಲಿಯ ಮಳೆಯಂತೂ ಇದ್ದೇ ಇರುತ್ತದೆ. ನೊವ್ಹೆಂಬರದಿಂದ ನಾಲ್ಕು ತಿಂಗಳು ಚಳಿಗಾಲ ಉಳಿದ ಎಂಟು ತಿಂಗಳು ಮಳೆಗಾಲವಿರುತ್ತದೆ. ಈ ಪ್ರಾಂತದೊಳಗೆ ಬೇಸಿಗೆಯು ಇರುವದೇ ಇಲ್ಲ. ಖಾಸೀ ಗುಡ್ಡದ ಮೇಲಿರುವ **ಚೆರಾಪುಂಜೀ** ಎಂಬಲ್ಲಿ ಪ್ರತಿ ವರುಷ ೪೫೦ ಇಂಚಿನಷ್ಟು ಮಳೆಯಾಗುತ್ತದೆ. ಇಷ್ಟು ಮಳೆಯು

ಜಗತ್ತಿನ ಯಾವ ಸ್ಥಳದಲ್ಲಿಯೂ ಆಗುವದಿಲ್ಲ. ಬಹಳ ಮಳೆಯಾಗುವದರಿಂದ ಇಲ್ಲಿಯ ಹವೆಯು ಕುಂದಾಗಿರುತ್ತದೆ. ಗುಡ್ಡಗಾಡು ಪ್ರದೇಶದ ಉನ್ನತ ವಾದ ಸ್ಥಳಗಳಲ್ಲಿ ತೇಗಿನ ಹಳವುಗಳಿರುತ್ತವೆ. ಅದಕ್ಕೂ ಕೆಳಗೆ ಬಂದರೆ ಅಲ್ಲಿ ಚಹದ ತೋಟಗಳಿರುತ್ತವೆ. ಉತ್ತರದಲ್ಲಿ ಬ್ರಹ್ಮಪುತ್ರಾ ಹೊಳೆಯ ಬೈಲಿನಲ್ಲಿ



ಆಕೃತಿ ೩೪ ಚಹದ ತೋಟ

ಭತ್ತವು ಚನ್ನಾಗಿ ಬೆಳೆಯುತ್ತದೆ. ಮಧ್ಯದಲ್ಲಿ ಶಿಲಾಂಗದ ತಪ್ಪಲು ಇರುತ್ತದೆ. ಮತ್ತು ದಕ್ಷಿಣಕ್ಕೆ ಸುರಮಾ ಹೊಳೆಯ ಕೊಳ್ಳವಿರುತ್ತದೆ. ಅಲ್ಲಿಯೂ ಭತ್ತವು ಚನ್ನಾಗಿ ಬರುತ್ತದೆ. ಬಂಗಾಲದಂತೆಯೇ ಇಲ್ಲಿಯಾದರೂ ವರುಷಕ್ಕೆ ಎರಡು ಭತ್ತದ ಬೆಳೆಗಳು ಬರುತ್ತವೆ. ಭತ್ತದ ಹೊರತಾಗಿ ಇಲ್ಲಿ ಹಣ್ಣುಹಂಪಲ ಗಳು ಚನ್ನಾಗಿ ಆಗುತ್ತವೆ. ಸಕ್ಕರಲಿಂಬೆ(ಮೋಸಂಬೀ), ಬಾಳೆ, ಪಪಯೀ ಮುಂತಾದ ಹಣ್ಣುದೋಟಗಳು ಇರುತ್ತವೆ. ಇತ್ತಲಾಗಿ ಬಟಾಟೆಗಳನ್ನು ಹೆಚ್ಚಾಗಿ ಬೆಳಿಸಹತ್ತಿದ್ದಾರೆ.

ಚಹವು ಆಸಾಮು ಪ್ರಾಂತದೊಳಗಿನ ಮುಖ್ಯವಾದ ಹುಟ್ಟುವಳಿಯು. ಆಸಾಮು ಪ್ರಾಂತವೇ ಚಹದ ಮೂಲಸ್ಥಾನವೆಂದು ಎಣಿಸಲ್ಪಡುತ್ತದೆ. ಗುಡ್ಡಗಳ ಇಳುಕಲಿನ ಮೇಲೆ ಚಹದ ತೋಟಗಳಿರುತ್ತವೆ. ಚಹದ ಗಿಡಕ್ಕೆ ಮಳೆ ಬಹಳ ಬೇಕು. ಆದರೆ ಬೊಡ್ಡೆಯ ಹತ್ತರ ನೀರು ನಿಲ್ಲಬಾರದು. ಅದು ತೀವ್ರವೇ ಹರಿದು ಹೋಗಬೇಕಾಗುತ್ತದೆ. ಈ ಪ್ರಕಾರದ ಎಲ್ಲ ಸೌಕರ್ಯಗಳು ಈ ಪ್ರಾಂತದೊಳಗೆ ಸ್ವಾಭಾವಿಕವಾಗಿಯೇ ಇರುತ್ತವೆ. ಚಹದ ಗಿಡಗಳನ್ನು ೨-೩ ಫೂಟಿಗಿಂತ ಹೆಚ್ಚು ಎತ್ತರ ಬೆಳೆಯಗೊಡುವದಿಲ್ಲ. ಆದ್ದರಿಂದ ಈ ಗಿಡಗಳನ್ನು ಆಗಾಗ್ಗೆ ಕತ್ತರಿಸಬೇಕಾಗುತ್ತದೆ. ಮೇಲಿಂದ ಮೇಲೆ ಕತ್ತರಿಸುವದರಿಂದ ಅದಕ್ಕೆ ಹೊಸ ಹೊಸ ಚಿಗುರುಗಳು ಯಾವಾಗಲೂ ಬರುತ್ತಿರುತ್ತವೆ. ಈ ಚಿಗುರುಗಳೆಂದರೇನೇ ಚಹವು. ವಾರಕ್ಕೊಮ್ಮೆ ಈ ಚಿಗುರೆಲೆಗಳನ್ನು ಕೈಯಿಂದಲೇ ಹರಿಯಬೇಕಾಗುತ್ತದೆ. ಈ ಎಲೆಗಳನ್ನು ಹರಿಯುವ ಕೆಲಸವು ಅತಿ ತ್ರಾಸದಾಯಕವಾಗಿರುತ್ತದೆ. ತಲೆಯ ಮೇಲೆ ಒಂದೇ ಸವನೆ ಮಳೆ ಸುರಿಯುವಾಗ ಕೆಸರಿನಲ್ಲಿ ನಿಂತು ಈ ಕೆಲಸವನ್ನು ಮಾಡಬೇಕಾಗುತ್ತದೆ. ಈ ಕೆಲಸವನ್ನು ಮಾಡಲಿಕ್ಕೆ ಬಿಹಾರೀ ಕೂಲಿಕಾರರು ಬರುತ್ತಾರೆ. ಚಹದ ಪೇಯವು ಸಾರ್ವತ್ರಿಕವಾಗಿರುವದರಿಂದ, ಅದಕ್ಕೆ ಯಾವಾಗಲೂ ಬೇಡಿಕೆಯು ಇದ್ದೇ ಇರುತ್ತದೆ. ಜಗತ್ತಿನಲ್ಲಿ ಹುಟ್ಟುವ ಚಹದ ಮೂರು ಪಾಲು ಕೇವಲ ಹಿಂದುಸ್ಥಾನದಲ್ಲಿ ಬೆಳೆಯುತ್ತದೆ.

ಚಹದ ಎಲೆಗಳನ್ನು ಚಿವುಟಿ ತೆಗೆದ ಬಳಿಕ ಅವುಗಳನ್ನು ಕಾರಖಾನೆಗಳಿಗೆ ಒಯ್ಯುತ್ತಾರೆ. ಅಲ್ಲಿ ಅವುಗಳಿಗೆ ಕಾವುಕೊಟ್ಟು, ಒಣಗಿಸಿ, ಸುರುಳಿಯನ್ನು ಮಾಡುತ್ತಾರೆ. ಆಮೇಲೆ ಚಹದ ಬೇರೆ ಬೇರೆ ವರ್ಗಗಳನ್ನು ಮಾಡುತ್ತಾರೆ. ಬಳಿಕ ಡಬ್ಬಿಗಳಲ್ಲಿ ತುಂಬಿ ಅವುಗಳನ್ನು ಚನ್ನಾಗಿ ಸೀಲ ಮಾಡಿ ದೇವದಾರದ ಪೆಟ್ಟಿಗೆಗಳಲ್ಲಿ ತುಂಬಿ, ಪರದೇಶಗಳಿಗೆ ಕಳಿಸುತ್ತಾರೆ. ಆಸಾಮುದ ಹಳವುಗಳಲ್ಲಿ ದೇವದಾರದ ಕಟ್ಟಿಗೆಯು ವಿಪುಲವಾಗಿ ಸಿಗುತ್ತದೆ. ಅದು ಹಗುರಾಗಿದ್ದು ಅದರಿಂದ ಹಲಗೆಗಳು ಚನ್ನಾಗಿ ಆಗುತ್ತವೆ.

ಆಸಾಮ ಪ್ರಾಂತವು ಸರಹದ್ದಿನ ಮೇಲಿರುವದರಿಂದ ಅದಕ್ಕೆ ವಿಶೇಷ ಮಹತ್ವವು ಪ್ರಾಪ್ತವಾಗಿದೆ. ಪಶ್ಚಿಮಕ್ಕೆ ಪೂರ್ವ ಪಾಕಿಸ್ತಾನ, ಉತ್ತರಕ್ಕೆ ಟಿಬೇಟ ಮತ್ತು ಚೀನ, ಆಗ್ನೇಯಕ್ಕೆ ಬ್ರಹ್ಮದೇಶದ ಗಡಿಗಳು ಆಸಾಮುಕ್ಕೆ ಹೊಂದಿಕೊಂಡಿರುತ್ತವೆ. ಈ ಮೂರೂ ಗಡಿಗಳಲ್ಲಿ ಯಾವಾಗಲೂ ತೊಂದರೆ

ಗಳು ಇದ್ದೇ ಇರುತ್ತವೆ. ಆದ್ದರಿಂದ ಸರಕಾರಕ್ಕೆ ಯಾವಾಗಲೂ ದಕ್ಷತೆ ಯಿಂದ ಇರಬೇಕಾಗುತ್ತದೆ. ಉತ್ತರ ಮತ್ತು ಪೂರ್ವ ಗಡಿಗಳ ಮೇಲೆ ದಟ್ಟಾದ ಹಳವುಗಳಿದ್ದು, ಅಲ್ಲಿ ಹಿಂದುಳಿದ ವನ್ಯಜನರ ವಸತಿಯುಂಟು. ನಾಗ, ಲುಶಾಯಿ, ಗಾರೋ, ಉತ್ತರ ಕಚರ, ಜೈಂತಿಯಾ ಮತ್ತು ಖಾಸೀ ಎಂಬ ಏಳು ಭಾಗಗಳಲ್ಲಿ ಈ ಜನರು ವಾಸಿಸುತ್ತಾರೆ. ಕ್ರಿಶ್ಚನ್ ಪಾದ್ರಿಗಳು ಕಳೆದ ನೂರು ವರ್ಷಗಳಿಂದ ಈ ಜನರ ಏಳಿಗೆಗಾಗಿ ಬಹಳ ಪ್ರಯತ್ನವನ್ನು ಮಾಡಿದ್ದಾರೆ. ದವಾಖಾನೆ, ಶಾಲೆಗಳನ್ನು ಸ್ಥಾಪಿಸಿ ಅವರು ಈ ವನ್ಯಜನರನ್ನು ಸುಧಾರಿಸಿದ್ದಾರೆ. ಈ ಜನರಲ್ಲಿ ಈಗ ಶಿಕ್ಷಣವು ಹೆಚ್ಚಾಗಿ ಬೆಳೆದಿರುತ್ತದೆ. ಇವರ ಮುಖ್ಯ ಉದ್ಯೋಗವು ಒಕ್ಕಲತನವು. ಇತ್ತಲಾಗಿ ಕೆಲವರು ಚಹದ ತೋಟದೊಳಗೆ ಕೂಲಿಯಸಲುವಾಗಿ ಹೋಗಹತ್ತಿದ್ದಾರೆ. ಈ ಜನರು ಸ್ವಭಾವದಿಂದ ಯಾವಾಗಲೂ ಆನಂದಿಗಳಾಗಿರುತ್ತಾರೆ.



ಆಕೃತಿ ೩೫
ಆಸಾಮುದೊಳಗಿನ ವನ್ಯಮನುಷ್ಯನು

ಆಸಾಮುದೊಳಗಿನ ಜನವಸತಿಯು ವಿರಲವಾಗಿರುತ್ತದೆ. ಈ ಪ್ರಾಂತದ ಕ್ಷೇತ್ರಫಲವು ಅರವತ್ತು ಸಾವಿರ ಚೌರಸ ಮೈಲು ಇದ್ದು, ಜನಸಂಖ್ಯೆಯು ಮಾತ್ರ ಕೇವಲ ಎಂಭತ್ತು ಲಕ್ಷ ಇರುತ್ತದೆ. ಇದರಲ್ಲಿಯ ಮೂರನೇ ಪಾಲು ವನ್ಯಜಾತಿಯ ಜನರಿರುತ್ತಾರೆ. ಜನವಸತಿಯು ಬಹುತರವಾಗಿ ಹಳ್ಳಿಗಳಲ್ಲಿಯೇ ಇರುತ್ತದೆ. ಅವರ ಮುಖ್ಯ ಉದ್ಯೋಗವು ಒಕ್ಕಲತನವಾಗಿರುತ್ತದೆ. ಭೂಮಿಯು ಬೆಳೆಯುಳ್ಳದ್ದಿರುವದರಿಂದಲೂ, ಮಳೆಯು ವಿಪುಲವಾಗಿರುವದರಿಂದಲೂ ಇಲ್ಲಿ ಬರಗಾಲದ ಅಂಜಿಕೆಯೇ ಇಲ್ಲ. ಆಸಾಮುದ ಒಕ್ಕಲಿಗನು ಚಹದ ತೋಟದೊಳಗೆ ದುಡಿಯಲಿಕ್ಕೆ ಹೋಗುವದಿಲ್ಲ. ಆದ್ದರಿಂದ ತೋಟಗಳ ಒಡೆಯರಿಗೆ ಕೂಲೀಕಾರರನ್ನು ಹೊರಗಿನಿಂದಲೇ ತರಬೇಕಾಗುತ್ತದೆ.

ಬಿಹಾರೀ ಕೂಲಿಗಾರರು ತೋಟಗಳಲ್ಲಿ ದುಡಿಯಲಿಕ್ಕೆಂದು ಇಲ್ಲಿ ಬರುತ್ತಾರೆ. ಕೆಲಕಾಲದ ನಂತರ ಅವರು ಇಲ್ಲಿಯೇ ಮನೆಮಾಡಿಕೊಂಡು ಇದ್ದುಬಿಡುತ್ತಾರೆ.

ಆಸಾಮದೊಳಗೆ ಖನಿಜ ಸಂಪತ್ತಿಯು ವಿಪುಲವಾಗಿರುತ್ತದೆ. ನಾಗ, ಗಾರೋ, ಖಾಸೀ, ಜೈಂತಿಯಾ ಗುಡ್ಡಗಳಲ್ಲಿ ಕಲ್ಲಿದ್ದಲಿಯ ಕಣಿಗಳಿರುತ್ತವೆ. ಡಿಗ್ಬೊಯಿಯ ಹತ್ತಿರ ಪೆಟ್ರೋಲಿಯಮ್‌ದ ಕಣಿಗಳಿದ್ದು ಅಲ್ಲಿ ಎಣ್ಣೆಯನ್ನು ಶುದ್ಧಮಾಡುವ ಕಾರಖಾನೆಗಳಿರುತ್ತವೆ. ಈ ಪ್ರಾಂತದೊಳಗೆ ಸುಣ್ಣದ ಹರಳುಗಳು ಹೇರಳವಾಗಿ ಸಿಗುತ್ತವೆ. ಅವುಗಳಿಂದ ಸಿಮೆಂಟು ಮಾಡುತ್ತಾರೆ. ಕಣಿಗಳಲ್ಲಿ ಕೆಲಸಮಾಡುವ ಕೂಲೀಕಾರರನ್ನು ಹೊರಗಿನಿಂದಲೇ ತರಬೇಕಾಗುತ್ತದೆ. **ಗೋಹತ್ತಿ** ಎಂಬ ಪಟ್ಟಣವು ಬ್ರಹ್ಮಪುತ್ರೆಯ ದಂಡೆಯ ಮೇಲಿದ್ದು ವ್ಯಾಪಾರದ ಮುಖ್ಯಸ್ಥಳವಾಗಿರುತ್ತದೆ. ಬರುಹೋಗುವದಕ್ಕೆ ಬ್ರಹ್ಮಪುತ್ರಾ ಹೊಳೆಯು ಬಹಳ ಉಪಯೋಗವುಳ್ಳದ್ದಿರುತ್ತದೆ. ಈಸ್ಟರ್ನ ಬಂಗಾಲ ರೇಲು ದಾರಿಯ ಒಂದು ಶಾಖೆಯು ಗೋಹತ್ತಿಯ ವರೆಗೆ ಹೋಗಿದ್ದು, ಅಲ್ಲಿಂದ ಮುಂದೆ ಪೂರ್ವಕ್ಕೆ ಬಂಗಾಲ ಆಸಾಮ ರೇಲು ಹೋಗಿರುತ್ತದೆ. **ಶಿಲಾಂಗ**ವು ಆಸಾಮದ ರಾಜಧಾನಿಯಾಗಿದ್ದು, ಗೋಹತ್ತಿಯಿಂದ ಶಿಲಾಂಗದ ವರೆಗೆ ಉತ್ತಮವಾದ ಮೋಟಾರಿನ ರಾಜಮಾರ್ಗವಿರುತ್ತದೆ. ಪೂರ್ವ-ಪಾಕಿಸ್ತಾನದ ನಿರ್ಮಾಣದಿಂದ ಆಸಾಮ-ಹಿಂದುಸ್ಥಾನಗಳ ನಡುವಿನ ಓಡಾಟವು ಬಹು ಕಷ್ಟದ್ದಾಗಿತ್ತು. ಆದರೆ ಮೊನ್ನೆ ಮೊನ್ನೆ ಉತ್ತರ ಭಾಗದಲ್ಲಿ ಹೊಸ ರಾಜಮಾರ್ಗವನ್ನೂ ಮಾಡಿದ್ದರಿಂದ ಬರುಹೋಗುವದು ಸುಲಭವಾಗಿರುತ್ತದೆ.

## ಪ್ರಶ್ನೆಗಳು

೧. ಆಸಾಮದೊಳಗೆ ಹೆಚ್ಚಾಗಿ ಮಳೆ ಯಾಕೆ ಆಗುತ್ತದೆ?

೨. ವನ್ಯಜಾತಿಯ ಜನರು ಮುಖ್ಯವಾಗಿ ಯಾವ ಭಾಗಗಳಲ್ಲಿ ವಾಸಿಸುತ್ತಾರೆ? ಅವರ ಸುಧಾರಣೆಯ ಬಗ್ಗೆ ಯಾರು ಪ್ರಯತ್ನ ಮಾಡಿರುವರು? ಅವರ ಉದ್ಯೋಗವೇನು?

೩. ಚಹದ ಬೆಳೆಗೆ ಯಾವ ಅನುಕೂಲತೆಗಳಿರಬೇಕು? ಚಹವನ್ನು ಪರದೇಶಗಳಿಗೆ ಹೇಗೆ ಕಳಿಸುತ್ತಾರೆ? ಮತ್ತು ಹಾಗೆ ಯಾಕೆ ಕಳಿಸುತ್ತಾರೆ?

೪. ಆಸಾಮ ಪ್ರಾಂತವು ಯಾವ ಯಾವ ದೇಶಗಳ ಗಡಿಗಳಿಗೆ ಹೊಂದಿಕೊಂಡಿರುತ್ತದೆ?

೫. ಆಸಾಮದೊಳಗಿನ ಮುಖ್ಯವಾದ ಖನಿಜಗಳು ಯಾವವು? ಅವು ಸಿಗುವ ಸ್ಥಳಗಳನ್ನು ಹೇಳಿರಿ.

೬. ಚಹದ ತೋಟದೊಳಗೆ ಕೆಲಸ ಮಾಡಲಿಕ್ಕೆ ಹೊರಗಿನಿಂದಲೇ ಕೂಲಿಕಾರರನ್ನು ತರಬೇಕಾಗುತ್ತದೆ. ಯಾಕೆ?

ಪಾಠ ೧೪

# ಮಧ್ಯ ಹಿಂದುಸ್ಥಾನ

ಗಂಗಾನದಿಯ ಕೊಳ್ಳವನ್ನು ದಾಟಿ ನಾವು ದಕ್ಷಿಣಕ್ಕೆ ಬಂದಕೂಡಲೆ ತಪ್ಪಲ ಪ್ರದೇಶವನ್ನು ಸೇರುವೆವು. ಈ ತಪ್ಪಲಿನ ಪಶ್ಚಿಮ ಭಾಗಕ್ಕೆ ಮಾಳವಾ, ಮಧ್ಯಭಾಗಕ್ಕೆ ಬುಂದೇಲಖಂಡ, ಮತ್ತು ಪಶ್ಚಿಮ ಭಾಗಕ್ಕೆ ಬಾಗೇಲಖಂಡ ಎಂಬ ಹೆಸರುಗಳಿರುತ್ತವೆ. ವಿಂಧ್ಯಪರ್ವತವು ಈ ತಪ್ಪಲಿನ ದಕ್ಷಿಣದ ಅಂಚಾಗಿರುತ್ತದೆ. ನರ್ಮದಾ ಹೊಳೆಯ ಕೊಳ್ಳದ ಪ್ರದೇಶ ವಾದರೂ ಮಾಳವಾದ ತಪ್ಪಲಿನಲ್ಲಿಯೇ ಬರುತ್ತದೆ. ನರ್ಮದಾ ಮತ್ತು ಶೋಣ ಹೊಳೆಗಳಿಂದ ಈ ತಪ್ಪಲು ಡೆಕ್ಕನ್ನದ ತಪ್ಪಲಿನಿಂದ ಬೇರೆಯಾಗಿ ರುತ್ತದೆ. ಇವುಗಳಲ್ಲಿ ನರ್ಮದೆಯ ಕೊಳ್ಳವು ಅರಬೀ ಸಮುದ್ರದ ಕಡೆಗೂ, ಶೋಣನದಿಯ ಕೊಳ್ಳವು ಗಂಗೆಯ ಕೊಳ್ಳದ ಕಡೆಗೂ ಇಳುಕಲಾಗಿರುತ್ತವೆ.

ಯಮುನೆಯ ಕೊಳ್ಳದೊಳಗಿಂದ ಮಾಳವಾದ ತಪ್ಪಲಿನ ಮೇಲೆ ಬರುವ ಮಾರ್ಗದ ಆಯಕಟ್ಟಿನ ಸ್ಥಳದಲ್ಲಿ ಝಾಂಸೀ ಪಟ್ಟಣವು ಇರುತ್ತದೆ. ಮಾಳವಾದ ತಪ್ಪಲಿನಿಂದ ದಕ್ಷಿಣದ ಕಡೆಗೆ ಹೋಗುವ ಮಾರ್ಗದ ಮೇಲೆ ಜಬಲಪೂರ ಪಟ್ಟಣವಿರುತ್ತದೆ. ಮಾಳವಾದ ತಪ್ಪಲು ಮತ್ತು ರಜಪೂತ ಸ್ಥಾನವು ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ಇದಲ್ಲದೇ ಭೌಗೋಲಿಕ ಪರಿಸ್ಥಿತಿಯಲ್ಲಿಯಾದರೂ ಎರಡೂ ಭಾಗಗಳಲ್ಲಿ ಬಹಳ ಸಾಮ್ಯವಿರುತ್ತದೆ. ಇವೆರಡೂ ಭಾಗಗಳಲ್ಲಿ ಮಳೆಯ ಅನಿಶ್ಚಿತತೆಯು ಇರುತ್ತದೆ. ಭೂಮಿಯು ತಗ್ಗುದಿನ್ನೆಗಳುಳ್ಳದ್ದರಿಂದ ಕಾಲುವೆಗಳನ್ನು ಅಗಿಯುವದೂ ಸಾಧ್ಯವಿಲ್ಲ. ಚಂಬಳಾ, ಕಾಳೀ, ಸಿಂಧೂ, ಬೆಟವಾ ಎಂಬ ಹೊಳೆಗಳು ಉತ್ತರವಾಹಿನಿ ಗಳಾಗಿದ್ದು ಯಮುನೆಗೆ ಕೂಡುತ್ತವೆ. ಮಳೆಗಾಲದಲ್ಲಿ ಈ ಹೊಳೆಗಳು ತುಂಬಿ ಹರಿಯುತ್ತವೆ. ಆದರೆ ಬೇಸಿಗೆಯಲ್ಲಿ ಮಾತ್ರ ಅವು ಹರಿಗಡಿಯುತ್ತವೆ.

ಒಕ್ಕಲತನವು ಮುಖ್ಯವಾಗಿ ಹೊಳೆಗಳ ಕೊಳ್ಳದಲ್ಲಿಯೇ ಸಾಗುತ್ತದೆ. ವೇಳೆಗೆ ಸರಿಯಾಗಿ ಮಳೆಯಾದರೆ ಜೋಳ, ಸಜ್ಜೆ, ಹತ್ತಿ ಮತ್ತು ಎಣ್ಣೇಕಾಳು ಗಳು ಚನ್ನಾಗಿ ಬರುತ್ತವೆ. ಹಿಂಗಾರಿಯಲ್ಲಿ ಗೋದಿಯು ಬರುತ್ತದೆ. ಗುಡ್ಡಗಳ ಮೇಲೆ ಹಳವುಗಳಿರುತ್ತವೆ. ಅಲ್ಲಿ ಮುಖ್ಯವಾಗಿ ಗುಡ್ಡಗಾಡು ಜನರು ವಾಸಿಸು ತ್ತಾರೆ. ಈ ಜನರು ಕುರಿ, ದನ, ಆಡುಗಳನ್ನು ಸಾಕುತ್ತಾರೆ.

ಈ ತಪ್ಪಲಿನ ಮೇಲೆ ಜನವಸತಿಯು ದಟ್ಟಾಗಿರುವದಿಲ್ಲ. ಪೇಶವೆಯವರ ಕಾಲಕ್ಕೆ ಶಿಂದೆ, ಹೋಳಕರ, ಪವಾರ ಮುಂತಾದ ಸರದಾರರು ಈ ಭಾಗದಲ್ಲಿ ಬಂದರು. ಮತ್ತು ಕಟ್ಟಕಡೆಗೆ ಇಲ್ಲಿಯೇ ನಿಂತುಬಿಟ್ಟರು. ಇಂದೂರ, ಗ್ವಾಲ್ಹೇರ, ಧಾರ ಎಂಬವು ಈ ಭಾಗದೊಳಗಿನ ಮರಾಠರ ಸಂಸ್ಥಾನಗಳಿದ್ದವು. ಭೋಪಾಳವು ಮುಸಲ್ಮಾನ ಸಂಸ್ಥಾನಿಕರ ಆಧೀನದಲ್ಲಿತ್ತು. ಈಗ ಈ ಭಾಗದೊಳಗಿನ ಎಲ್ಲ ಸಂಸ್ಥಾನಗಳನ್ನು ಒಟ್ಟುಗೂಡಿಸಿ

೧೦೦೦ ಫೂಟಕ್ಕಿಂತ ಕಡಿಮೆ — ೧೦೦೦-೨೦೦೦ ಫೂ — ೨೦೦೦ ಫೂಟಕ್ಕಿಂತ ಹೆಚ್ಚು

ಆಕೃತಿ ೩೬ ಮಧ್ಯಹಿಂದುಸ್ಥಾನ

ಮಧ್ಯಭಾರತವೆಂಬ ಒಂದೇ ಪ್ರಾಂತವನ್ನು ಮಾಡಿ, ಅದನ್ನು ಹಿಂದೀ ಸಂಘ ರಾಜ್ಯಕ್ಕೆ ಕೂಡಿಸಿ ಬಿಟ್ಟಿದ್ದಾರೆ. ಗ್ವಾಲ್ಹೇರ, ಇಂದೂರ, ಭೋಪಾಳ, ರತಲಾಮ, ಖಾಂಡವಾ ಮುಂತಾದ ಇತಿಹಾಸ ಪ್ರಸಿದ್ಧವಾದ ಪಟ್ಟಣಗಳಿದ್ದು ರೇಲುದಾರಿಗಳ ಕೇಂದ್ರಗಳಾಗಿರುತ್ತವೆ. ಇಂದೂರದಲ್ಲಿ ಬಟ್ಟೆಯ ಗಿರಣಿಗಳಿರುತ್ತವೆ. ಇಂದೂರದ ಹತ್ತರವೇ ಮಹು ಎಂಬಲ್ಲಿ ದಂಡಿನ ಠಾಣ್ಯವಿರುತ್ತದೆ. ಕ್ಷಿಪ್ರಾ ಹೊಳೆಯ ದಡದಲ್ಲಿ **ಉಜ್ಜಯನಿ** ಎಂಬ ಪ್ರಾಚೀನ ಪಟ್ಟಣವಿರುತ್ತದೆ. ರಾಜಾವಿಕ್ರಮಾದಿತ್ಯನು ಇಲ್ಲಿ ರಾಜ್ಯವಾಳಿದನು. ಅವನ ಆಶ್ರಯದಲ್ಲಿಯೆ ಕಾಳಿದಾಸ ಮುಂತಾದ ವಿದ್ವಾಂಸರಿದ್ದರು. ಅಕಬರ ಬಾದಶಹನು ಮಾಳವಾ ಪ್ರಾಂತವನ್ನು ಜಯಿಸಿದ ಮೇಲೆ ಉಜ್ಜಯನಿಯನ್ನೇ ಅದರ ರಾಜಧಾನಿಯನ್ನಾಗಿ

ಮಾಡಿದನು. ಅಲ್ಲಿ ಬಹು ಪ್ರಾಚೀನಕಾಲದ ವೇಧಶಾಲೆಯು ಇರುತ್ತದೆ. ಈ ಪಟ್ಟಣವು ಕರ್ಕವೃತ್ತದ ಮೇಲಿರುತ್ತದೆ. ಧಾರದ ಹತ್ತರ ಮಾಂಡವಗಡ ಎಂಬ ಪ್ರಸಿದ್ಧವಾದ ಕೋಟೆಯುಂಟು. ಬಾಜ ಬಹಾದ್ದೂರ ಮತ್ತು ರಾಣೀ ರೂಪಮತಿ ಇವರ ಬಗ್ಗೆ ಎಷ್ಟೋ ಕಥೆಗಳು ಈಗಲಾದರೂ ಈ ಭಾಗದಲ್ಲಿ ಪ್ರಚಲಿತವಾಗಿರುತ್ತವೆ.



ಆಕೃತಿ ೩೭ ಹಿಂದೋಳಾ ಮಹಾಲ

ಮಾಳವಾದ ತಪ್ಪಲಿಗಿಂತಲೂ ಬುಂದೇಲಖಂಡ, ಬಾಘೇಲಖಂಡ ಗಳಲ್ಲಿ ಮಳೆಯು ಹೆಚ್ಚಾಗಿ ಆಗುತ್ತದೆ. ಈ ಭಾಗದಲ್ಲಿ ೪೦ ಇಂಚಿಗಿಂತ ಹೆಚ್ಚು ಮಳೆಯಾಗುತ್ತದೆ. ಶೋಣ ನದಿಯ ಕೊಳ್ಳದೊಳಗಂತೂ ಅದಕ್ಕೂ ಹೆಚ್ಚು ಮಳೆ ಬೀಳುತ್ತದೆ. ಈ ಪ್ರದೇಶವು ಗುಡ್ಡಗಾಡು ಇದ್ದರೂ ಒಕ್ಕಲ ತನಕ್ಕೆ ಯೋಗ್ಯವಾದ ಭೂಮಿಯು ಸಾಕಷ್ಟಿರುತ್ತದೆ. ಹಲವು ಕಡೆಯಲ್ಲಿ ಗುಡ್ಡಗಳ ಇಳುಕಲಿನ ಮೇಲೆ ಒಡ್ಡುಗಳನ್ನು ಹಾಕಿ, ಹೊಲಗಳನ್ನು ಮಾಡಿ ರುತ್ತಾರೆ. ಈ ಗುಡ್ಡಗಳಲ್ಲಿಯ ಕಲ್ಲು ಬಹಳ ಬಿರುಸಾಗಿರುವದು. ಒಕ್ಕಲಿಗರು ಮನೆಗಳನ್ನು ಕಲ್ಲಿನಿಂದ ಗಟ್ಟಿಮುಟ್ಟಾಗಿ ಕಟ್ಟುವರು. ತೊಲೆ, ಜಂತಿ, ಕಂಬ, ಫರಸಿಗಳೆಲ್ಲ ಕಲ್ಲಿನವೇ ಇರುತ್ತವೆ. ಕೇವಲ ಬಾಗಿಲುಗಳ

ಫಡಕುಗಳನ್ನು ಮಾತ್ರ ಕಟ್ಟಿಗೆಯಿಂದ ಮಾಡಿರುತ್ತಾರೆ. ಇಲ್ಲಿಯ ಕಲ್ಲು ನಸುಗೆಂಪಿನ ಮೇಲಿರುತ್ತದೆ. ಅದರ ಮೇಲೆ ಕೊರೆದ ಕೆಲಸವೂ, ಕೆತ್ತಿಗೆಯ ಕೆಲಸವೂ ಸುಂದರವಾಗಿ ಆಗುತ್ತವೆ.

ಈ ಭಾಗದಲ್ಲಿ ಭತ್ತದ ಬೆಳೆಯು ಚನ್ನಾಗಿ ಬರುತ್ತದೆ. ಹತ್ತಿಯು ಮಾತ್ರ ಬೆಳೆಯುವದಿಲ್ಲ. ಗೋದಿ, ಕಡಲೆ, ಎಣ್ಣೀಕಾಳು ಮುಂತಾದವುಗಳು ಚನ್ನಾಗಿ ಬರುತ್ತವೆ. ಇಲ್ಲಿ ಹುಲ್ಲುಗಾವಲುಗಳು ಸಾಕಷ್ಟು ಇರುವದರಿಂದ, ದನಗಳನ್ನು ಮೇಯಿಸಲಿಕ್ಕೆ ಸುಲಭವಾಗಿರುತ್ತದೆ. ಗೋದಿಯ ರೊಟ್ಟಿ, ಜೋಳದ ರೊಟ್ಟಿಗಳೇ ಇಲ್ಲಿಯ ಒಕ್ಕಲಿಗರ ಮುಖ್ಯ ಆಹಾರವಾಗಿರುತ್ತದೆ. ಹೈನುಹಾಲು ವಿಪುಲವಾಗಿ ಸಿಗುತ್ತದೆ. ಈ ಭಾಗದ ಒಕ್ಕಲಿಗರು ಬೇರೆ ಉದ್ಯೋಗಗಳ ಗೊಡವೆಗೆ ಹೋಗುವದಿಲ್ಲ. ಮಳೆಯು ಚನ್ನಾಗಿ ಆದರೆ ತುಸು ಶ್ರಮದಲ್ಲಿ ಒಕ್ಕಲತನವು ಚನ್ನಾಗಿ ಸಾಗುತ್ತದೆ. ಮಳೆಯಾಗದಿದ್ದರೆ ದೈವದ ಮಾತೆಂದು ತಿಳಿದು ಸುಮ್ಮನೇ ಕೂಡ್ರುತ್ತಾರೆ. ಇಲ್ಲಿ ಜನವಸತಿಯು ವಿರಲ ವಾಗಿರುತ್ತದೆ.

ಮರಾಠರ ಕಾಲಕ್ಕೆ ಬುಂದೇಲಖಂಡಕ್ಕೆ ಬಹಳ ಮಹತ್ವವಿತ್ತು. ಅಲ್ಲಿ ರಾಜಾ ಛತ್ರಸಾಲನೆಂಬ ಅರಸನು ಮರಾಠರ ಸಹಾಯದಿಂದ ಮೊಗಲರ ಸತ್ತೆಯನ್ನು ಅಲ್ಲಗಳೆದು ಸ್ವರಾಜ್ಯವನ್ನು ಸ್ಥಾಪಿಸಿದನು. ಜೈತಪೂರ, ಪನ್ನಾ, ಛಿಲ್ಸಾ, ಬಂದಾ ಮುಂತಾದ ಇತಿಹಾಸ ಪ್ರಸಿದ್ಧವಾದ ಸ್ಥಳಗಳಿರುತ್ತವೆ.

## ಪ್ರಶ್ನೆಗಳು

೧. ಮಧ್ಯ ಹಿಂದುಸ್ಥಾನದೊಳಗಿನ ಮುಖ್ಯ ಭಾಗಗಳು ಯಾವವು? ಅವುಗಳ ಹವಾಮಾನವನ್ನೂ ಹುಟ್ಟುವಳಿಗಳನ್ನೂ ಹೇಳಿರಿ.
೨. ಬುಂದೇಲಖಂಡದ ಒಕ್ಕಲಿಗನ ಮನೆಯನ್ನು ವರ್ಣಿಸಿರಿ.
೩. ಕೆಳಗೆ ಕೊಟ್ಟ ಸ್ಥಳಗಳನ್ನು ನಕಾಶದೊಳಗೆ ತೋರಿಸಿರಿ.
ಅ) ಗ್ವಾಲ್ಹೇರ ಬ) ಇಂದೂರ ಕ) ಭೋಪಾಳ ಡ) ಜೈತಪೂರ ಈ) ಛಿಲ್ಸಾ.
೪. ಉಜ್ಜಯಿನೀ ಪಟ್ಟಣದ ಬಗ್ಗೆ ನಿಮಗೆ ಗೊತ್ತಿದ್ದದ್ದನ್ನು ಬರೆಯಿರಿ.
೫. ಮಧ್ಯ ಹಿಂದುಸ್ಥಾನದೊಳಗೆ ಹರಿಯುವ ಮುಖ್ಯ ಹೊಳೆಗಳು ಯಾವವು? ಅವು ಒಕ್ಕಲತನಕ್ಕೆ ಎಷ್ಟರ ಮಟ್ಟಿಗೆ ಉಪಯೋಗವಾಗುತ್ತವೆ.

ಪಾಠ ೧೫

# ಕೊಂಕಣ ಪಟ್ಟಿ

ಬಂಗಾಲದ ಉಪಸಾಗರದ ಮೇಲಿಂದ ಬೀಸುವ ಮನ್ಸೂನ ಗಾಳಿಯು ಶಾಖೆಯಿಂದ ಬಂಗಾಲ, ಆಸಾಮ, ಸಂಯುಕ್ತ ಪ್ರಾಂತ, ಪಂಜಾಬ ಮತ್ತು ಕಾಶ್ಮೀರ ಭಾಗಗಳಿಗೆ ಮಳೆಯು ಹೇಗಾಗುತ್ತದೆ ಮತ್ತು ಎಷ್ಟರ ಮಟ್ಟಿಗೆ ಆಗುತ್ತದೆ ಎಂಬದನ್ನು ಇಲ್ಲಿಯ ವರೆಗೆ ನಾವು ನೋಡಿದೆವು. ಮತ್ತು ಮಳೆಯ ಪ್ರಮಾಣಕ್ಕನುಸರಿಸಿ ಜನಜೀವನದಲ್ಲಿಯೂ, ಹುಟ್ಟುವಳಿಗಳಲ್ಲಿಯೂ ಹೇಗೆ ಹೆಚ್ಚುಕಡಿಮೆಯಾಗುತ್ತದೆಂಬುವದನ್ನು ನೀವು ತಿಳಿದುಕೊಂಡಿರಿ. ಇನ್ನು ಅರಬೀ ಸಮುದ್ರದ ಮೇಲಿಂದ ಬೀಸುವ ಮನ್ಸೂನಿನ ಶಾಖೆಯಿಂದ ಕೊಂಕಣ ಮತ್ತು ದೇಶ ಅಂದರೆ ಮಹಾರಾಷ್ಟ್ರ ಮತ್ತು ಕರ್ನಾಟಕ ಎಂಬ ನಮಗೆ ಪರಿಚಿತವಾದ ಪ್ರದೇಶಗಳಿಗೆ ಮಳೆಯು ಹೇಗೆ ಆಗುತ್ತದೆ? ಮತ್ತು ಅಲ್ಲಿಯ ಜನಜೀವನವು ಯಾವ ಪ್ರಕಾರದ್ದಿರುತ್ತದೆ? ಎಂಬದನ್ನು ವಿಚಾರ ಮಾಡುವಾ.

ಸಹ್ಯಾದ್ರಿಯ ಪಶ್ಚಿಮಕ್ಕೆ ದಮಣದಿಂದ ಭಟಕಲ್ಲದ ವರೆಗಿನ ಕಿರಿಯಗಲಾದ ಪಟ್ಟಿಗೆ ಕೊಂಕಣವೆಂದೂ ಭಟಕಲ್ಲದಿಂದ ಕನ್ಯಾಕುಮಾರಿಯ ವರೆಗೆ ಇರುವ ಪಟ್ಟಿಗೆ ಮಲಬಾರವೆಂದೂ ಅನ್ನುತ್ತಾರೆ. ದಮಣದಿಂದ ಕನ್ಯಾಕುಮಾರಿಯ ವರೆಗೆ ಈ ಪಟ್ಟಿಯು ೭೦೦ ಮೈಲು ಉದ್ದವಾಗಿರುತ್ತದೆ. ಕೊಂಕಣ ಪಟ್ಟಿಯು ದಕ್ಷಿಣೋತ್ತರ ೩೦೦ ಮೈಲು ಉದ್ದವಾಗಿದ್ದು ೩೦ರಿಂದ ೫೦ ಮೈಲುಗಳ ವರೆಗೆ ಅಗಲವಾಗಿರುತ್ತದೆ. ಮಲಬಾರದ ದಂಡೆಯು ಇದಕ್ಕೂ ಹೆಚ್ಚು ಅಗಲವಾಗಿರುತ್ತದೆ. ಇದಕ್ಕೆ ದಕ್ಷಿಣ ಕೊಂಕಣವೆನ್ನಬಹುದು. ಉತ್ತರ ಕೊಂಕಣದಲ್ಲಿ ಠಾಣೆ, ಕುಲಾಬಾ, ರತ್ನಾಗಿರೀ ಮತ್ತು ಕಾರವಾರ ಎಂಬ ನಾಲ್ಕು ಜಿಲ್ಹೆಗಳಿರುತ್ತವೆ. ಸಹ್ಯಾದ್ರಿ ಪರ್ವತದಲ್ಲಿ ಉಗಮ ಹೊಂದುವ ಎಷ್ಟೋ ಹೊಳೆಗಳು ಪಶ್ಚಿಮಕ್ಕೆ ಅರಬೀ ಸಮುದ್ರಕ್ಕೆ ಕೂಡುತ್ತವೆ. ಈ ಹೊಳೆಗಳೆಲ್ಲ ಗುಡ್ಡಗಾಡು ಪ್ರದೇಶದಲ್ಲಿ ಹರಿಯುವದರಿಂದ ಓಡಾಟಕ್ಕೆ ಈ ಹೊಳೆಗಳ ಉಪಯೋಗವಾಗುವದಿಲ್ಲ. ಆದರೂ ಅವುಗಳ ಮುಖಗಳ ಹತ್ತರ ೩-೪ ಮೈಲುಗಳ ವರೆಗೆ ಅವುಗಳ ಉಪಯೋಗವಾಗುತ್ತದೆ ಸಮುದ್ರದ ಏರಿಕೆಯ ನೀರು ಒಳಸೇರುವ ಹೊಳೆಯ ಮುಖದ ಭಾಗಕ್ಕೆ ಒತು ಅಥವಾ 'ಖಾಡೀ' ಎಂದೆನ್ನುವರು.

ಮುಂಬಯಿ ನಡುಗಡ್ಡೆಯನ್ನು ಬಿಟ್ಟರೆ ಕೊಂಕಣದ ಉಳಿದ ಭಾಗ ದಲ್ಲೆಲ್ಲ ಒಕ್ಕಲತನವೇ ಜನರ ಮುಖ್ಯವಾದ ಉದ್ಯೋಗವಾಗಿರುತ್ತದೆ. ಇಲ್ಲಿಯ ಕಲ್ಲುಬಂಡೆಗಳು ನಸುಗೆಂಪಾಗಿರುವದರಿಂದ ಇಲ್ಲಿಯ ಮಣ್ಣಾದರೂ ಅದೇ ಬಣ್ಣದ್ದಿರುತ್ತದೆ. ಮಣ್ಣು ಜಿಗುಟಾಗಿರುವದಿಲ್ಲ. ಆದ್ದರಿಂದ ನೀರು ತೀವ್ರವೇ ಆರಿಹೋಗುತ್ತದೆ. ಇದಲ್ಲದೆ ಎಷ್ಟೋ ಹೊಲಗಳನ್ನು ಗುಡ್ಡಗಳ ಇಳುಕಲಿನ ಮೇಲೆ ಒಡ್ಡುಗಳನ್ನು ಹಾಕಿ ಮಾಡಿರುತ್ತಾರೆ. ಆದ್ದರಿಂದ ನೀರಿನ ಅವಶ್ಯಕತೆಯು ಬಹಳವಾಗಿರುತ್ತದೆ. ಬಿತ್ತಿಗೆಯಾದಂದಿನಿಂದ ಒಂದೇ ಸವನೆ ಮಳೆ ಬೇಕಾಗುತ್ತದೆ. ೧೦-೧೫ ದಿವಸಗಳ ವರೆಗೆ ಮಳೆಯಾಗದೇ ಹೋಯಿತೆಂದರೆ ಬೆಳೆಗಳು ಒಣಗಲಾರಂಭಿಸುತ್ತವೆ. ಈ ಭಾಗದಲ್ಲಿ ವಿಪುಲ ವಾಗಿ ಮಳೆಯಾಗುತ್ತದೆ. ನೈಋತ್ಯ ಮನ್ಸೂನ ಗಾಳಿಗಳು ಸಹ್ಯಾದ್ರಿಯ ಪಶ್ಚಿಮದ ಬದಿಯಿಂದ ತಡೆದು, ಬಹುತರ ಎಲ್ಲ ಮೋಡಗಳು ಮಳೆಯ ರೂಪದಿಂದ ಕೆಳಗೆ ಬೀಳುತ್ತವೆ. ಕೊಂಕಣದಲ್ಲಿ ೭೫ ರಿಂದ ೧೦೦ ಇಂಚಿನ ವರೆಗೆ ಮಳೆಯಾಗುತ್ತದೆ.

ಕೊಂಕಣದೊಳಗಿನ ಭೂಮಿಯು ಫಲವತ್ತಾಗಿರುವದಿಲ್ಲ. ಆದ್ದರಿಂದ ಅಲ್ಲಿಯ ಒಕ್ಕಲಿಗನಿಗೆ ಹನ್ನೆರಡೂ ತಿಂಗಳು ಹೊಲದಲ್ಲಿ ಕಷ್ಟಮಾಡಬೇಕಾಗು ತ್ತದೆ. ಮಳೆಗಾಲವು ಬರುವದರೊಳಗಾಗಿ ಅವನು ತನ್ನ ಭೂಮಿಯಲ್ಲಿಯ ಕೆಲಭಾಗವನ್ನು ಸುಟ್ಟು ಸಗಣಿಯು ಗೊಬ್ಬರವನ್ನು ಹಾಕಿ ಚನ್ನಾಗಿ ಹದಮಾಡು ತ್ತಾನೆ. ಯಾಕಂದರೆ ಎಲ್ಲ ಭೂಮಿಗೆ ಸಾಲುವಷ್ಟು ಗೊಬ್ಬರ-ಉರುವಲುಗಳು ಸಿಗುವದಿಲ್ಲ. ಮಳೆಗಾಲವು ಆರಂಭವಾದ ಕೂಡಲೆ ಹದಮಾಡಿದ ನೆಲದಲ್ಲಿ ಭತ್ತವನ್ನು ಬಿತ್ತುತ್ತಾನೆ. ಉಳಿದ ಭೂಮಿಯಲ್ಲಿ ಕೆಸರು ಮಾಡುತ್ತಾನೆ. ಈಗ ಒಂದೇ ಸವನೇ ಮಳೆ ಸುರಿಯುತ್ತಿರುತ್ತದೆ. ಒಡ್ಡುಗಳು ಒಡೆಯದಂತೆ ನೋಡಿಕೊಳ್ಳಬೇಕಾಗುತ್ತದೆ. ಹೊಲಗಳನ್ನು ಊಳಿದ ಬಳಿಕ ತಾನು ಬಿತ್ತಿದ ಭತ್ತದ ಸಸಿಗಳನ್ನು ಜಾಗ್ರತೆಯಿಂದ ಬೇರಿಗೆ ಧಕ್ಕೆಯಾಗದಂತೆ ಕಿತ್ತಿ, ಅವು ಗಳನ್ನು ಹೊಲದೊಳಗೆ ಹಚ್ಚುತ್ತಾನೆ. ಈ ಕೆಲಸವು ಕಷ್ಟದಾಯಕವಾಗಿದ್ದು ಆಗ ಮನೆಯವರೆಲ್ಲರೂ ಕೆಲಸಕ್ಕೆ ನೆರವಾಗುತ್ತಾರೆ. ಒಂದೊಂದು ಗೇಣಿನ ಮೇಲೆ ಎರಡೆರಡು ಸಸಿಗಳನ್ನು ಕೂಡಿಸಿ ಊರುತ್ತಾರೆ. ಆಷಾಢ ಮಾಸದ ಕೊನೆಗೆ ಹಚ್ಚುವ ಕೆಲಸವು ಮುಗಿಯುತ್ತದೆ. ಶ್ರಾವಣ ಮಾಸದಲ್ಲಿ ಕಸತೆಗೆದ ಬಳಿಕ ಒಕ್ಕಲಿಗನಿಗೆ ವಿಶ್ರಾಂತಿಯು ಸಿಗುತ್ತದೆ. ಭಾದ್ರಪದದಲ್ಲಿ ಗೌರೀ

ಹುಣ್ಣಿವೆಗೆ ಭತ್ತವನ್ನು ಕೊಯ್ಯಹತ್ತುತ್ತಾರೆ. ಕೊಯ್ದು, ವಣಗಿಸಿದ ಮೇಲೆ ಬಡಿದು ರಾಶೀ ಮಾಡುತ್ತಾರೆ.

ಇಡೀ ದಿವಸವೆಲ್ಲ ಒಕ್ಕಲಿಗನು ಹೊಲದಲ್ಲಿ ದುಡಿಯುತ್ತಿರುತ್ತಾನೆ. ಮುಂಜಾವಿನಲ್ಲಿ ಅವನು 'ಪೇಜ' ಅಂದರೆ ಅಕ್ಕಿಯ ಗಂಜಿಯನ್ನು ಕುಡಿದು



ಆಕೃತಿ ೩೮ ಭತ್ತದ ಸಸಿಗಳನ್ನು ಊರುವದು

ಕೆಲಸಕ್ಕೆ ಹೋಗುತ್ತಾನೆ. ಮಧ್ಯಾನ್ಹದ ಊಟವನ್ನು ಹೊಲದಲ್ಲಿಯೇ ಮುಗಿಸಿಕೊಂಡು ಸಂಜೆಗೆ ಮನೆಗೆ ಬರುತ್ತಾನೆ. ನವಣಕ್ಕಿಯ ರೊಟ್ಟಿ, ಖಾರ, ಶಕ್ಯವಿದ್ದರೆ ಮೀನಿನ ಸಾರು ಇವೇ ಇವನ ಮುಖ್ಯವಾದ ಆಹಾರಗಳಾಗಿರುತ್ತವೆ. ಸಂಜೆಗೆ ಮನೆಗೆ ಬಂದು ಸ್ನಾನಮಾಡಿ ವಿಶ್ರಾಂತಿಯನ್ನು ಹೊಂದಿ, ನೆರೆಯವರ ಕೂಡ ಭಜನೆಯನ್ನಾಗಲೀ, ಮಾತುಕತೆಗಳನ್ನಾಗಲೀ ಮಾಡಿ ಉಂಡು ಮಲಗುತ್ತಾನೆ. ಈ ರೀತಿಯಿಂದ ಅವನ ಜೀವನವು ತೀರ ಸಾದಾ ಇರುತ್ತದೆ. ಅವನ ಮನೆಯು ಕಲ್ಲು-ಮಣ್ಣುಗಳಿಂದ ಮಾಡಿದ್ದು ಅವುಗಳಿಗೆ ಇಳಿಜಾರಾದ ಚಪ್ಪರಗಳಿರುತ್ತವೆ. ಅವನ ಉಡುಪುಗಳು ತೀರ ತುಸು ಇರುತ್ತವೆ. ಬಿಸಿಲಿನಲ್ಲಿ

ಕೆಲಸಮಾಡುವಾಗ ಅವನು ಬರಿ ಮೈಯಿಂದಲೇ ಇರುತ್ತಾನೆ. ಕೊಂಕಣದಲ್ಲಿ ಚಳಿಯು ಕಡಿಮೆ. ಹವೆಯಾದರೂ ಕುಂದಾಗಿರುತ್ತದೆ. ಯಾವಾಗಲೂ ಬೆವರು ಬರುತ್ತದೆ. ಆದ್ದರಿಂದ ಅವನಿಗೆ ದಪ್ಪಾದ ಅರಿವೆಗಳ ಅವಶ್ಯಕತೆ ಇರುವದಿಲ್ಲ.



ಆಕೃತಿ ೩೯ ಕೊಂಕಣದೊಳಗಿನ ಒಕ್ಕಲಿಗನ ಮನೆ

ಕೊಂಕಣದೊಳಗಿನ ಮುಖ್ಯವಾದ ಬೆಳೆಯೆಂದರೆ ಭತ್ತವು. ಕುಲಾಬಾ ಜಿಲ್ಲೆಯು ಅಕ್ಕಿಯ ಆಗರವೆಂದು ಪ್ರಸಿದ್ಧವಿರುತ್ತದೆ. ಗುಡ್ಡಗಳ ಇಳುಕಲಿನ ಮೇಲಿರುವ ಕಸುವಿಲ್ಲದ ಭೂಮಿಗಳಲ್ಲಿ ನವಣೆ, ವರೀದ ಅಕ್ಕಿಯಂಥ ಕಡಿಮೇ ತರದ ಬೆಳೆಗಳನ್ನು ಬೆಳೆಯುತ್ತಾರೆ. ಯಾವದೇ ಬೆಳೆ ಬಾರದಂಥ ಭೂಮಿಯಲ್ಲಿ ಹುಲ್ಲು ಬೆಳೆಯುತ್ತಾರೆ. ಪೌಷ್ಟಿಕವಾದ ಹುಲ್ಲಿನ ಕೊರತೆ ಯಿರುವದರಿಂದ ಇಲ್ಲಿ ಹೈನಿನ ಕೊರತೆಯು ಇರುತ್ತದೆ.

ಕೊಂಕಣದೊಳಗೆ ಭತ್ತದ ಬೆಳೆಯು ಮುಖ್ಯವಾಗಿದ್ದರೂ, ನೀರಿನ ಸೌಕರ್ಯವಿದ್ದಲ್ಲಿ ಹಣ್ಣುದೋಟಗಳಾದರೂ ಇರುತ್ತವೆ. ಠಾಣೆ ಜಿಲ್ಲೆಯೊಳಗಿನ ಉಲ್ಲಾಸ ಎಂಬ ಹೊಳೆಯ ಕೊಳ್ಳದೊಳಗೆ ಬಾಳೆ, ಚಿಕ್ಕೂ ಮತ್ತು ಕಲಮೀ

ಮಾವಿನ ಹಣ್ಣುಗಳಾಗುತ್ತವೆ. ಚಿಕ್ಕೂ ಗಿಡವನ್ನು ಮೊಟ್ಟಮೊದಲು ಒಬ್ಬ ಇರಾಣಿಯು ಇಲ್ಲಿ ತಂದನು. ಈಗ ಈ ಬೆಳೆಯು ಇಲ್ಲಿ ಚನ್ನಾಗಿ ಬರುತ್ತದೆ. ಕುಲಾಬಾ ಜಿಲ್ಲೆಯೊಳಗೆ ಅಡಿಕೆ, ಕಲ್ಲಂಗಡಿಗಳು ಚನ್ನಾಗಿ ಬೆಳೆಯುತ್ತವೆ. ರತ್ನಾಗಿರೀ ಜಿಲ್ಲೆಯೊಳಗೆ ಮಾವು, ಹಲಸು, ಗೋಡಂಬೆಗಳು ಬೆಳೆಯುತ್ತವೆ.



ಆಕೃತಿ ೪೦ ಕೊಂಕಣದೊಳಗಿನ ಸಮುದ್ರದಂಡೆಯ ನೋಟ

ಹಪೂಸ ಮತ್ತು ಪಾಯರೀ ಎಂಬ ಜಾತಿಯ ಮಾವುಗಳು ಪ್ರಸಿದ್ಧವಾಗಿರುತ್ತವೆ. ಇತ್ತಲಾಗಿ ರತ್ನಾಗಿರಿಯಲ್ಲಿ ಕಲಮೀ ಮಾವಿನ ಗಿಡಗಳ ದೊಡ್ಡ ದೊಡ್ಡ ತೋಪುಗಳನ್ನು ಹಚ್ಚಿದ್ದಾರೆ. ಈ ಗಿಡಗಳನ್ನು ಹಚ್ಚಿದ ಐದನೇ ವರುಷದಿಂದ ಕಾಯಿಗಳಾಗಲಿಕ್ಕೆ ಆರಂಭವಾಗುತ್ತದೆ. ಈ ಜಿಲ್ಲೆಗಳೆಲ್ಲ ಮುಂಬಯಿಗೆ ಸಮೀಪವಾಗಿರುವದರಿಂದ ಅಲ್ಲಿ ಬೆಳೆಯುವ ಯಾವತ್ತೂ ಪದಾರ್ಥಗಳಿಗೆ ಬೇಡಿಕೆ ಇದ್ದು ಬೆಲೆಯಾದರೂ ಚನ್ನಾಗಿ ಬರುತ್ತದೆ.

## ಪ್ರಶ್ನೆಗಳು

೧. ಕೊಂಕಣದೊಳಗಿನ ಹವಾಮಾನವನ್ನು ವರ್ಣಿಸಿರಿ.

೨. ಕೊಂಕಣದೊಳಗಿನ ಒಕ್ಕಲಿಗನ ಜೀವನವನ್ನು ವರ್ಣಿಸಿರಿ.

೩. ಕೊಂಕಣದೊಳಗಿನ ಮುಖ್ಯವಾದ ಹುಟ್ಟುವಳಿಗಳು ಯಾವವು?
೪. ಕೊಂಕಣದೊಳಗೆ ಸಿಗುವ ಮುಖ್ಯವಾದ ಹಣ್ಣುಗಳು ಯಾವವು? ಅವು ಎಲ್ಲಿ ಸಿಗುತ್ತವೆ?
೫. ಚಿಕ್ಕೂ ಹಣ್ಣನ್ನು ಮೊಟ್ಟಮೊದಲು ಯಾರು ತಂದರು? ಈ ಹಣ್ಣುಗಳು ಮುಖ್ಯವಾಗಿ ಎಲ್ಲಿ ಬೆಳೆಯುತ್ತವೆ? ಮತ್ತು ಎಲ್ಲಿ ಹೋಗುತ್ತವೆ?

ಪಾಠ ೧೬

# ಮೀನ ಹಿಡಿಯುವದು ಮತ್ತು ಉಪ್ಪು ತಯಾರಿಸುವದು

ಕೊಂಕಣದೊಳಗೆ ಭತ್ತ ಮತ್ತು ಹಣ್ಣುಹಂಪಲಿನ ಹೊರ್ತಾಗಿ ಇನ್ನೆರಡು ಮುಖ್ಯವಾದ ಉದ್ಯೋಗಗಳು ನಡೆಯುತ್ತವೆ. ಅವು ಯಾವವೆಂದರೆ: ೧) ಮೀನ ಹಿಡಿಯುವದು ಮತ್ತು ೨) ಉಪ್ಪು ತಯಾರು ಮಾಡುವದು. ಸಮುದ್ರ ದಂಡೆಯ ಮೇಲಿರುವ ಖಾರವೀ ಮತ್ತು ಕೋಳೀ ಎಂಬ ಜಾತಿಯ ಜನರು ಮುಖ್ಯವಾಗಿ ಮೀನ ಹಿಡಿಯುವ ಉದ್ಯೋಗವನ್ನು ಮಾಡುತ್ತಾರೆ. ಅವರು ರಾತ್ರಿಯಲ್ಲಿ ತಮ್ಮ ಡೋಣಿಗಳನ್ನು ಸಮುದ್ರದಲ್ಲಿ ೩-೪ ಮೈಲು ದೂರ ತಕ್ಕೊಂಡು ಹೋಗಿ ಜಾಳಿಗೆಯನ್ನು ಹಾಕುತ್ತಾರೆ. ಜಾಳಿಗೆಯು ಜಡವಾದ ಕೂಡಲೆ ಅದನ್ನು ಡೋಣಿಯೊಳಗೆ ಎಳೆದುಕೊಳ್ಳುತ್ತಾರೆ. ಈ ರೀತಿಯಿಂದ ಸೂರ್ಯೋದಯದ ವರೆಗೆ ಕೆಲಸಮಾಡಿ ಮನೆಗೆ ಬರುತ್ತಾರೆ. ದಂಡೆಯ ಮೇಲೆ ಅವರ ಹೆಂಗಸರು ಅವುಗಳನ್ನು ತೊಳೆದು, ವರ್ಗೀಕರಣಮಾಡಿ ಪೇಟೆಗೆ ಮಾರಾಟಕ್ಕೆ ಒಯ್ಯುತ್ತಾರೆ.

ಮೀನಗಳನ್ನು ಹಿಡಿದ ಒಂದೆರಡು ದಿವಸಗಳಲ್ಲಿಯೇ ಅವುಗಳ ಉಪಯೋಗವನ್ನು ಮಾಡಬೇಕಾಗುತ್ತದೆ. ಕೊಂಕಣದೊಳಗಿನ ಹವೆಯು ಆರ್ದ್ರವಾಗಿರುವದರಿಂದಲೂ, ಬೆಚ್ಚಗಾಗಿರುವದರಿಂದಲೂ ಮೀನಗಳು ತಡೆಯುವದಿಲ್ಲ. ಬರ್ಫಿನಲ್ಲಿಟ್ಟರೆ ಮಾತ್ರ ತಡೆಯುತ್ತವೆ. ಆದರೆ ಅದು ಬಹಳ ಖರ್ಚಿನದಿರುತ್ತದೆ. ಮಳೆಗಾಲದಲ್ಲಿ ಸಮುದ್ರವು ಅಶಾಂತವಾಗಿರುವದರಿಂದ ಮೀನ ಹಿಡಿಯುವ ಉದ್ಯೋಗವು ಕಟ್ಟಾಗುತ್ತದೆ. ಮತ್ತು ಮೀನಿನ ಪೂರೈಕೆಯು ಒಮ್ಮೆಲೇ ಕಡಿಮೆಯಾಗುತ್ತದೆ.

ಕೊಂಕಣದೊಳಗೆ ಎಷ್ಟೋ ಬೇರೆ ಬೇರೆ ಜಾತಿಯ ಮೀನಗಳು ಸಿಗುತ್ತವೆ. ಮುಂಬಯಿ ಹತ್ತರ ಘೋಳ ಎಂಬ ಜಾತಿಯ ಮೀನವು ವಿಪುಲ



ಆಕೃತಿ ೪೧ ಜಾಲಗಾರನು ಜಾಳಿಗೆಯನ್ನು ಒಗೆಯುತ್ತಲಿದ್ದಾನೆ

ವಾಗಿ ಸಿಗುತ್ತದೆ. ಇದಕ್ಕೆ ಬೆಲೆಯಾದರೂ ಚನ್ನಾಗಿ ಬರುತ್ತದೆ. ಉತ್ತರ ಕೊಂಕಣದಲ್ಲಿ ವಾಮ ಮತ್ತು ಪಾಪ್ಲೇಟ ಎಂಬ ಮೀನಗಳು ಸಿಗುತ್ತವೆ.

ಸರಂಗ ಎಂಬ ಜಾತಿಯ ಮೀನಗಳು ರತ್ನಾಗಿರಿಯ ಹತ್ತರ ಸಿಗುತ್ತವೆ. ಮಳೆಗಾಲದ ಆರಂಭಕ್ಕೆ ಈ ಮೀನಗಳು ಬಹಳವಾಗಿ ಬರುತ್ತವೆ. ಪೇಟೆಯಲ್ಲಿ ಈ ಜಾತಿಯ ಮೀನಗಳು ಬರಹತ್ತಲು ಮಳೆಗಾಲವು ಸಮೀಪಿಸಿ ತೆಂದು ಜನರು ತಿಳಿದುಕೊಳ್ಳುತ್ತಾರೆ. ಮಾಲವಣ, ಗೋವಾ, ಕಾರವಾರ



ಆಕೃತಿ ೪೨ ಉಪ್ಪಿನ ಆಗರಗಳು

ಈ ಭಾಗಗಳಲ್ಲಿ ಬಾಂಗಡಾ ಜಾತಿಯ ಮೀನಗಳು ಹೆಚ್ಚಾಗಿ ಸಿಗುತ್ತವೆ. ಉಪ್ಪಿನಲ್ಲಿ ಕಾದಿಟ್ಟರೆ ಮೀನು ಬಹಳ ದಿವಸಗಳ ವರೆಗೆ ತಡೆಯುತ್ತದೆ. ಆದರೆ ಅದು ವೆಚ್ಚಿನದೂ, ಕಷ್ಟತರವಾದದ್ದೂ, ಇರುತ್ತದೆ. ಕೊಳೆತ ಮೀನ ವನ್ನು ಗೊಬ್ಬರದಂತೆ ಉಪಯೋಗಿಸುತ್ತಾರೆ.

ಉಪ್ಪು ತಯಾರಿಸುವ ಉದ್ಯೋಗವು ಸಮುದ್ರದ ಮೇಲೆ ಅವಲಂಬಿಸಿರುವ ಎರಡನೇ ಮುಖ್ಯ ಉದ್ಯೋಗವಾಗಿರುತ್ತದೆ. ಸಮುದ್ರದ ನೀರು ಕಟ್ಟಿ ಆದರಿಂದ ಉಪ್ಪು ತಯಾರು ಮಾಡುತ್ತಾರೆ. ಇಂಥ ಉಪ್ಪಿನ ಆಗರಗಳು ಠಾಣೆ, ಮತ್ತು ಕುಲಾಬಾ ಜಿಲ್ಲೆಗಳಲ್ಲಿ ಬಹಳವಾಗಿರುತ್ತವೆ. ಸಮುದ್ರವು ಏರಿದಾಗ ಆದರ ನೀರನ್ನು ದೊಡ್ಡದೊಂದು ಕೆರೆಯಲ್ಲಿ ಸಂಗ್ರಹಿಸುತ್ತಾರೆ.

ಅದಕ್ಕೆ ನೀರಿನ ಖಜಾನೆ ಎಂದೆನ್ನುತ್ತಾರೆ. ಅಲ್ಲಿಂದ ಅದನ್ನು ಬೇರೆ ಚೌಕಿನಲ್ಲಿ ಬಿಟ್ಟು ಅಲ್ಲಿ ಬಿಸಿಲಿನಿಂದ ಅದು ಉಗಿಯಾಗಿ ಅದರೊಳಗಿನ ಉಪ್ಪಿನ ಅಂಶವು ಹೆಚ್ಚಾಗುತ್ತದೆ. ಅಲ್ಲಿಂದ ಈ ಉಪ್ಪು ನೀರನ್ನೂ ಸಪಾಟಾಗಿ ಮಾಡಿಟ್ಟ ಹೊಲದೊಳಗೆ ಬಿಡುತ್ತಾರೆ. ಇಂಥ ಹೊಲಗಳಿಗೆ 'ವಾಫೆ' ಅಥವಾ ಮಡಿಗ ಳೆಂದೆನ್ನುತ್ತಾರೆ.

ಪ್ರತಿಯೊಂದು ಮಡಿಯು ೬೦ ಫೂಟು ಉದ್ದ, ೩೦ ಫೂಟು ಅಗಲ, ೧೩ ಇಂಚು ಆಳವಾಗಿರುತ್ತದೆ. ಪ್ರತಿಯೊಂದು ಮಡಿಯ ನೆಲವನ್ನು ಚೆನ್ನಾಗಿ ಗಟ್ಟಿಮಾಡಬೇಕಾಗುತ್ತದೆ. ಮಡಿಗಳಲ್ಲಿ ನೀರು ಬಂದಕೂಡಲೇ ಅದು ತೀವ್ರವೇ ಉಗಿಯಾಗಿ ಕೆಳಗೆ ಉಪ್ಪಿನ ಹಳಕುಗಳು ಉಳಿಯುತ್ತವೆ. ಅವು ಗಳನ್ನು ಕಟ್ಟಿಗೆಯಿಂದ ಮಾಡಿದ ಸಲಿಕೆಗಳಿಂದ ಎಳೆದು ಕೂಡಹಾಕುತ್ತಾರೆ. ಪ್ರತಿಯೊಂದು ಮಡಿಯೊಳಗಿಂದ ಪ್ರತಿ ವರುಷ ಸುಮಾರು ೯೦ ರಿಂದ ೧೦೦ ಮಣದ ವರೆಗೆ ಉಪ್ಪು ದೊರೆಯುತ್ತದೆ. ಅಕ್ಟೋಬರ ತಿಂಗಳಿನ ಮಧ್ಯದಿಂದ ಜೂನ್ ತಿಂಗಳಿನ ವರೆಗೆ ಉಪ್ಪು ತಯಾರ ಮಾಡುವ ಕೆಲಸವು ಸಾಗುತ್ತದೆ. ಮುಂದೆ ಮಳೆಗಾಲವು ಬರುವವರಿಂದ ಈ ಕಾರ್ಯವು ಕಟ್ಟಾಗುತ್ತದೆ. ಸಮುದ್ರದ ನೀರು ಬೇಕಾದಷ್ಟು ಸಿಗುವದಲ್ಲದೆ ಅದನ್ನು ಉಗಿಯನ್ನಾಗಿ ಮಾಡಲಿಕ್ಕೆ ಬೇಕಾಗುವ ಉಷ್ಣತೆಯಾದರೂ ಸೂರ್ಯನಿಂದ ಪುಕ್ಕಟೆಯಾಗಿ ಸಿಗುತ್ತದೆ. ಕೇವಲ ತರುಬರುವ ಮತ್ತು ಕೂಲಿಯ ಸಲುವಾಗಿಯಷ್ಟೇ ವೆಚ್ಚವು ತಗಲುತ್ತದೆ.

## ಪ್ರಶ್ನೆಗಳು

೧. ಕೊಂಕಣದೊಳಗಿನ ಮುಖ್ಯವಾದ ಉದ್ಯೋಗಗಳು ಯಾವವು? ಅವುಗಳ ವರ್ಣನೆಯನ್ನು ಸಂಕ್ಷಿಪ್ತವಾಗಿ ಕೊಡಿರಿ.

೨. ಬೇರೆ ಬೇರೆ ಜಾತಿಯ ಮೀನಗಳು ಯಾವವು? ಅವು ಸಿಗುವ ಮುಖ್ಯ ಸ್ಥಳಗಳು ಯಾವವು?

೩. ಸಮುದ್ರದ ನೀರಿನಿಂದ ಉಪ್ಪನ್ನು ಹೇಗೆ ತಯಾರಿಸುತ್ತಾರೆ?

೪. ಮೀನುಗಳ ಉಪಯೋಗವನ್ನು ಯಾತರ ಸಲುವಾಗಿ ಮಾಡುತ್ತಾರೆ?

೫. ಮೀನುಗಳನ್ನು ಕಾದಿಡುವ ಮುಖ್ಯ ರೀತಿಗಳು ಯಾವವು?



# ಮುಂಬಯಿ ಪಟ್ಟಣವೂ ದ್ವೀಪವೂ

ಮುಂಬಯಿ ಪ್ರಾಂತದ ರಾಜ್ಯಕಾರಭಾರವು ಮುಂಬಯಿ ಪಟ್ಟಣದೊಳಗಿಂದಲೇ ನಡೆಯುತ್ತದೆ. ಜಗತ್ತಿನೊಳಗಿನ ಅತಿ ದೊಡ್ಡ ಮತ್ತು ಮುಂದುವರಿದ ಪಟ್ಟಣಗಳೊಳಗೆ ಇದು ಒಂದಾಗಿರುತ್ತದೆ. ಇದರ ಕಾರಣವೇನೆಂದರೆ ಇಲ್ಲಿಯ ಬಂದರವು ಅತಿ ವಿಸ್ತಾರವಾಗಿದ್ದು ಅನುಕೂಲವಾಗಿರುತ್ತದೆ. ಮಹಾಸಾಗರಗಳಲ್ಲಿ ಓಡಾಡುವ ದೊಡ್ಡ ದೊಡ್ಡ ನೂರಾರು ಹಡಗುಗಳು ಸುರಕ್ಷಿತವಾಗಿ ನಿಲ್ಲುವಷ್ಟು ಅದು ದೊಡ್ಡ ಬಂದರವಾಗಿರುತ್ತದೆ.




ಆಕೃತಿ ೪೩ ಮುಂಬಯಿ ಬಂದರವು

ಏಳು ಸಣ್ಣ ಸಣ್ಣ ನಡುಗಡ್ಡೆಗಳು ಕೂಡಿ ಈ ಪಟ್ಟಣವಾಗಿರುತ್ತದೆ. ಮೂನ್ನೂರು ವರುಷಗಳ ಹಿಂದೆ ಈ ನಡುಗಡ್ಡೆಗಳು ಬೇರೆ ಬೇರೆಯಾಗಿದ್ದವು ಈ ನಡುಗಡ್ಡೆಗಳಲ್ಲಿ ಮೀನುಗಾರರ ವಸತಿಯೇ ಇತ್ತು. ಎಲ್ಲ ಕಡೆಯಲ್ಲಿಯೂ ತೆಂಗಿನ ತೋಟಗಳಿದ್ದವು ಮೀನುಗಾರರ ಈ ಹಾಳು ನಡುಗಡ್ಡೆಗಳು ಹೋಗಿ ಇಂಥ ಸುಂದರವಾದ ಪಟ್ಟಣವು ಹೇಗಾಯಿತು?

ಇದರ ಮುಖ್ಯ ಕಾರಣವೇನೆಂದರೆ ಅದು ಸುರಕ್ಷಿತವಾದ ಮತ್ತು ಅನುಕೂಲವಾದ ಬಂದರದ ಸ್ಥಳವಾಗಿರುತ್ತದೆ. ಜಗತ್ತಿನೊಳಗಿನ ಅತ್ಯುತ್ತಮವಾದ ಬಂದರಗಳಲ್ಲಿ ಇದು ಒಂದಾಗಿರುತ್ತದೆ. ಈ ಬಂದರವು ಪೆಟ್ಟಿಗೆಯಂತೆ ಭದ್ರವಾಗಿರುತ್ತದೆ. ಒಂದು ಬದಿಗೆ ದಕ್ಷಿಣೋತ್ತರವಾಗಿ ಹಬ್ಬಿದ ನಡುಗಡ್ಡೆಗಳು, ಇನ್ನೊಂದು ಬದಿಗೆ ಕುಲಾಬಾ ಜಿಲ್ಲೆಯ ದಂಡೆ. ಇವುಗಳ ನಡುವೆ

ಈ ಬಂದರವಿರುತ್ತದೆ. ಮುನ್ನೂರು ವರುಷಗಳ ಹಿಂದೆ ಯುರೋಪದ ವ್ಯಾಪಾರಸ್ಥರು ಹಿಂದುಸ್ಥಾನದೊಳಗೆ ಮೊಟ್ಟಮೊದಲು ಬಂದಾಗ ಈ ಬಂದರದ ಮಹತ್ವವು ಅವರ ಲಕ್ಷ್ಯದಲ್ಲಿ ಬಂದಿತು. ಹಿಂದುಸ್ಥಾನದೊಳಗೆ ಆ ಕಾಲದ ರಾಜ್ಯವಾಳುವಂಥ ಮೊಗಲ-ಮರಾಠರಿಗೆ ಹಡಗುಪಡೆಯ ಕಡೆಗೆ ಅಷ್ಟು ಲಕ್ಷ್ಯವಿದ್ದಿಲ್ಲ. ಆದ್ದರಿಂದ ಪೋರ್ತುಗೀಜ ವ್ಯಾಪಾರಸ್ಥರು ಈ ದ್ವೀಪಗಳನ್ನು ತಮ್ಮ ಸ್ವಾಧೀನದಲ್ಲಿ ಸುಲಭವಾಗಿ ತೆಗೆದುಕೊಂಡರು. ಪೋರ್ತುಗೀಜರ ಕಡೆಯಿಂದ ಈ ದ್ವೀಪಗಳು ಇಂಗ್ಲೀಶರ ಕಡೆಗೆ ಬಂದವು.

ಬ್ರಿಟಿಶ ವ್ಯಾಪಾರಸ್ಥರು ತೀವ್ರವೇ ಮುಂಬಯಿಯನ್ನು ವ್ಯಾಪಾರದ ಪಡಮೂಲೆಯನ್ನಾಗಿ ಮಾಡಿದರು. ಹಿಂದುಸ್ಥಾನದ ಮೇಲೆ ಬ್ರಿಟಿಶರ ವರ್ಚಸ್ಸು ಹೆಚ್ಚಾಗುತ್ತ ಹೋದಂತೆ ಅವರ ವ್ಯಾಪಾರವೂ ಬೆಳೆಯಿತು. ಅದರ ಸಂಗಡವೇ ಮುಂಬಯಿ ಪಟ್ಟಣದ ಮಹತ್ವವಾದರೂ ಹೆಚ್ಚುತ್ತ ಹೋಯಿತು. ಪರದೇಶಗಳ ಸಂಗಡ ವ್ಯಾಪಾರವು ಮುಂಬಯಿ ಮಾರ್ಗದಿಂದಲೇ ಆರಂಭವಾಯಿತು. ಬೇರೆ ಬೇರೆಯಾಗಿದ್ದ ನಡುಗೆಡ್ಡೆಗಳು ಒಂದಕ್ಕೊಂದು ಜೋಡಿಸಲ್ಪಟ್ಟವು. ೧೮೫೩ನೇ ಇಸ್ವಿಯಲ್ಲಿ ರೇಲುದಾರಿಯು ಆರಂಭವಾದ ಕೂಡಲೇ ಮುಂಬಯಿ ಪಟ್ಟಣವು ಹತ್ತರದಲ್ಲಿರುವ ಠಾಣೆ ಜಿಲ್ಲೆಗೆ ಜೋಡಿಸಲ್ಪಟ್ಟಿತು. ಈಗ ಮುಂಬಯಿ ಪಟ್ಟಣದಿಂದ ಹಿಂದೂಸ್ಥಾನದೊಳಗಿನ ಎಲ್ಲ ದೊಡ್ಡ ದೊಡ್ಡ ಪಟ್ಟಣಗಳಿಗೆ ರೇಲು ದಾರಿಗಳಾಗಿರುತ್ತವೆ.

ಬಿ. ಬಿ. ಅಂಡ ಸೀ. ಆಯ್ (ಪಶ್ಚಿಮ ರೇಲ್ವೆ) ಕಂಪನಿಯ ರೇಲುದಾರಿಯು ಗುಜರಾಥ, ಕಾಠೇವಾಡ, ರಜಪೂತಸ್ಥಾನದೊಳಗಿಂದ ಹಾದು, ದಿಲ್ಲಿಯ ವರೆಗೆ ಹೋಗಿರುತ್ತದೆ. ಜೀ. ಆಯ್. ಪೀ. (ಮಧ್ಯ ರೇಲ್ವೆ) ರೇಲು ದಾರಿಯು ಮಧ್ಯಪ್ರಾಂತದೊಳಗಿಂದ ಅಲಹಾಬಾದದ ಮೇಲೆ ಹಾದು ಕಲಕತ್ತೆಗೆ ಹೋಗಿರುತ್ತದೆ. ಇಟಾರ್ಸಿ, ಭೋಪಾಳಗಳ ಮೇಲಿಂದ ದಿಲ್ಲಿಯ ವರೆಗೆ, ಪುಣೆ, ಸೋಲ್ಲಾಪೂರಗಳ ಮೇಲಿಂದ ಮದ್ರಾಸದ ವರೆಗೆ ರೇಲುದಾರಿಗಳಾಗಿರುತ್ತವೆ. ಮುಂಬಯಿ ಬಂದರದೊಳಗಿಂದ ಪರದೇಶಗಳಿಗೆ ಹೋಗುವ (ರಫ್ತಾಗುವ) ಸರಕುಗಳಲ್ಲಿ ಅರಳಿಯು ಮುಖ್ಯವಾದದ್ದಿರುತ್ತದೆ. ಇದು ಮುಖ್ಯವಾಗಿ ಗುಜರಾಥ, ವರ್ಹಾಡ, ಮಧ್ಯಪ್ರಾಂತ್ಯ, ಕರ್ನಾಟಕದೊಳಗಿಂದ ಮುಂಬಯಿಗೆ ಬರುತ್ತದೆ. ಇದಲ್ಲದೇ ಹತ್ತೀಕಾಳು, ಎಳ್ಳು, ನೆಲಗಡಲೆ, ಮುಂತಾದ ಎಣ್ಣೆಕಾಳುಗಳು, ತೊಗಲು ಮುಂತಾದ ಸರಕುಗಳು ಈ ಬಂದರ

ದೊಳಗಿಂದ ಪರದೇಶಗಳಿಗೆ ರಫ್ತಾಗುತ್ತವೆ. ತಯಾರ ಸರಕುಗಳು ಯಂತ್ರಸಾಮುಗ್ರಿ, ಮೋಟರಗಾಡಿ ಮುಂತಾದವುಗಳು ಪರದೇಶಗಳಿಂದ ಇಲ್ಲಿ ಬಂದು, ಮುಂದೆ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಿಗೆ ಹೋಗುತ್ತವೆ.

ಪರದೇಶಗಳಿಂದ ಸರಕುಗಳನ್ನು ಇಳಿಸಲಿಕ್ಕೆ ಧಕ್ಕೆಗಳನ್ನು ಕಟ್ಟಿದ್ದಾರೆ. ಅದರಂತೆ ಹಡಗುಗಳಿಗೆ ದುರುಸ್ತಿಯನ್ನು ಮಾಡಲಿಕ್ಕೆ ಗೋದೆಗಳನ್ನು ಕಟ್ಟಿ-



ಆಕೃತಿ ೪೪ ಹಿಂದುಸ್ಥಾನದ ಮಹಾದ್ವಾರ, ಮುಂಬಯಿ.

ದ್ದಾರೆ. ಗೋದೆಯೊಳಗೆ ಹಡಗವು ಬಂದಿತೆಂದರೆ ಅದರ ಬಾಗಿಲವನ್ನು ಇಕ್ಕಿ ಒಳಗಿನ ನೀರನ್ನೆಲ್ಲ ಪಂಪಿನಿಂದ ಹೊರಗೆ ಹಾಕುತ್ತಾರೆ. ಆ ಮೇಲೆ ಹಡಗುಗಳ ದುರಸ್ತಿಯನ್ನು ಮಾಡುತ್ತಾರೆ. ಇಂಥ ಗೋದೆಗೆ 'ಒಣಗೋದೆ' ಎಂದೆನ್ನುತ್ತಾರೆ. ಗೋದೆಗಳಲ್ಲಿ ಎಷ್ಟೋ ಜನರು ದುಡಿಯುತ್ತಿರುತ್ತಾರೆ. ಗೋದೆಗಳ ವ್ಯವಸ್ಥೆಯನ್ನಿಡಲಿಕ್ಕೆ 'ಪೋರ್ಟಟ್ರಸ್ಟ' ಎಂಬ ಸ್ವತಂತ್ರವಾದ ಖಾತೆಯು ಇರುತ್ತದೆ.

ಮುಂಬಯಿ ಪಟ್ಟಣವು ಮಹತ್ವದ ವ್ಯಾಪಾರದ ಸ್ಥಳವಲ್ಲದೇ ಅಲ್ಲಿ ಗಿರಣಿಗಳೂ, ಕಾರಖಾನೆಗಳೂ ಇದ್ದು, ಉದ್ಯೋಗ ವ್ಯವಸಾಯಗಳಿಂದ ತುಂಬಿ

ತುಳುಕುತ್ತದೆ. ಇಲ್ಲಿ ಬಟ್ಟೆಯ ಗಿರಣಿಗಳು, ಬಣ್ಣದ, ತೊಗಲಿನ, ರೇಲು ಗಾಡಿಯ ಸಾಮಾನುಗಳನ್ನು ಮಾಡುವ, ಅದರಂತೆ ಅವುಗಳನ್ನು ದುರಸ್ತಿ ಮಾಡುವ ಮುಂತಾದ ಎಷ್ಟೋ ಕಾರಖಾನೆಗಳಿರುತ್ತವೆ. ಪರದೇಶಗಳಿಂದ ಬರುವ ಯಂತ್ರಸಾಮುಗ್ರಿ, ಬೇರೆ ಬೇರೆ ಪ್ರಾಂತಗಳಿಂದ ಬರುವ ಕಚ್ಚಾ ಮಾಲು, ಕೊಂಕಣ ಮತ್ತು ಮಹಾರಾಷ್ಟ್ರಗಳಿಂದ ಬರುವ ಕೂಲೀಕಾರರು ಈ ಮೂರು ಕಾರಣಗಳಿಂದ ಮುಂಬಯಿಯೊಳಗಿನ ಉದ್ಯೋಗ ವ್ಯವಸಾಯಗಳು ಭರದಿಂದ ಬೆಳೆದವು. ಇದಲ್ಲದೆ ಕಾರಖಾನೆಗಳಿಗೆ ಬೇಕಾಗುವ ಬಂಡವಲವನ್ನು ಹಾಕಲಿಕ್ಕೆ ಶ್ರೀಮಂತ ವ್ಯಾಪಾರಿಗಳಾದರೂ ಇದ್ದಾರೆ. ಬಟ್ಟೆಗಳ ಉದ್ಯೋಗವು ಮುಂಬಯಿಯಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಮುಂಬಯಿ ಪಟ್ಟಣದ ಉತ್ತರ ಭಾಗದಲ್ಲಿ ಬಹಳ ಗಿರಣಿಗಳಿರುತ್ತವೆ. ಇಲ್ಲಿಯ ಗಿರಣಿಗಳಿಂದ ಪ್ರತಿವರುಷ ಎರಡು ಕೋಟಿಗಿಂತ ಹೆಚ್ಚು ಗಜ ಅರಿವೆಯು ಹೊರಡುತ್ತದೆ. ಮುಂಬಯಿಯ ಹವೆಯು ಆರ್ದ್ರವಾಗಿರುವದರಿಂದ ಎಳೆಗಳು ಹರಿಯುವದಿಲ್ಲ. ನೀರಿನ ಪೂರೈಕೆಯಾದರೂ ಸಾಕಷ್ಟು ಇರುತ್ತದೆ. ಪುಣೆಯ ಹತ್ತರ ಬೋರಘಾಟದಲ್ಲಿ ಟಾಟಾ ಕಂಪನಿಯವರು ವಿದ್ಯುಚ್ಛಕ್ತಿಯನ್ನು ಹುಟ್ಟಿಸುವ ಕಾರಖಾನೆಯನ್ನು ತೆಗೆದಂದಿನಿಂದ, ಹೆಚ್ಚಿಗೆ ಅನುಕೂಲವಾಗಿರುತ್ತದೆ. ಮೊದಲು ಗಿರಣಿಗಳ ಸಲುವಾಗಿ ದೂರಿನಿಂದ ಕಲ್ಲಿದ್ದಲಿಯನ್ನು ತರಬೇಕಾಗುತ್ತಿತ್ತು. ಸದ್ಯಕ್ಕೆ ಎಲ್ಲ ಗಿರಣಿಗಳು, ಕಾರಖಾನೆ, ಉಗಿಬಂಡಿ ಮುಂತಾದವುಗಳೆಲ್ಲ ವಿದ್ಯುತ್ತಿನ ಮೇಲೆಯೇ ನಡೆಯುತ್ತವೆ. ತಾನ್ಸಾ ಎಂಬ ವಿಸ್ತಾರವಾದ ಕೆರೆಯಿಂದ ಮುಂಬಯಿ ಪಟ್ಟಣಕ್ಕೆ ನೀರಿನ ಪೂರೈಕೆಯಾಗುತ್ತದೆ. ವಿದ್ಯುತ್ತಿನ ಪೂರೈಕೆಯು ಖೋಪೊಲೀ ಎಂಬ ಸ್ಥಳದಿಂದ ಆಗುತ್ತದೆ. ಗಿರಣಿಗಳಲ್ಲಿ ದುಡಿಯುವ ಕೂಲಿಕಾರರು ಮುಖ್ಯವಾಗಿ ಮರಾಠಿಗರಿರುವದರಿಂದ ಮಹಾರಾಷ್ಟ್ರದವರಿಗೆ ಮುಂಬಯಿ ಪಟ್ಟಣದ ಬಗ್ಗೆ ಹೆಚ್ಚು ಆಸ್ಥೆಯುಂಟಾಗಿದೆ.

## ಪ್ರಶ್ನೆಗಳು

೧. ಮುಂಬಯಿ ಪಟ್ಟಣಕ್ಕೆ ಮಹತ್ವವು ಬರಲಿಕ್ಕೆ ಕಾರಣಗಳೇನು ?

೨. ಮುಂಬಯಿ ಬಂದರದ ಆಮದು ರಫ್ತುಗಳನ್ನು ಹೇಳಿರಿ.

೩. ಮುಂಬಯಿ ಪಟ್ಟಣವು ಬಟ್ಟೆಗಳ ಗಿರಣಿಗಳ ಕೇಂದ್ರವಾಗಲಿಕ್ಕೆ ಕಾರಣಗಳಾವವು?

೪. ಮುನ್ನೂರು ವರುಷಗಳ ಹಿಂದೆ ಮುಂಬಯಿಯು ಪರಿಸ್ಥಿತಿಯು ಹೇಗೆ ಇತ್ತು?
೫. ಮುಂಬಯಿಯಿಂದ ಹೋಗುವ ಮುಖ್ಯವಾದ ರೇಲುಮಾರ್ಗಗಳು ಯಾವವು? ಅವು ಯಾವ ಪ್ರಾಂತಗಳೊಳಗಿಂದ ಹಾದು ಎಲ್ಲಿಯು ವರೆಗೆ ಹೋಗುತ್ತವೆ?

ಪಾಠ ೧೮

## ಮಲಬಾರದ ದಂಡೆ (ದಕ್ಷಿಣ ಕೊಂಕಣ)

ಭಟಕಳದಿಂದ ದಕ್ಷಿಣಕ್ಕೆ ಕನ್ಯಾಕುಮಾರಿಯ ವರೆಗೆ ಇರುವ ಸಮುದ್ರ ದಂಡೆಯ ಕಿರಿಯಗಲಾದ ಪಟ್ಟಿಯೇ ಮಲಬಾರದ ದಂಡೆಯು. ಈ ಪಟ್ಟಿಯ ದಕ್ಷಿಣ ತುದಿಗೆ ಈಶಾನ್ಯ ಮತ್ತು ನೈಋತ್ಯ ಮನ್ಸೂನಗಳಿಂದ ಮಳೆಯಾಗುವದರಿಂದ ಇಲ್ಲಿ ೮ ತಿಂಗಳು ಮಳೆಯಾಗುತ್ತದೆ. ಉಳಿದ ಕಡೆಯಲ್ಲಿ ೪ ತಿಂಗಳು ಮಳೆಯಾಗುತ್ತದೆ. ಈ ದಂಡೆಗುಂಟ ಮಂಗಳೂರು, ಕೋಚೀನ, ಕ್ವಿಲಾನ ಎಂಬ ಮಹತ್ವದ ಬಂದರಗಳಿರುತ್ತವೆ. ಇಲ್ಲಿ ಹೇಳಿಕೊಳ್ಳುವಷ್ಟು ದೊಡ್ಡ ಹೊಳೆಗಳಿರುವುದಿಲ್ಲ. ಈ ದಂಡೆಯ ಮೇಲಿರುವ **ಕಾಲಿಕತ್ತ** ಎಂಬ ಬಂದರಕ್ಕೆ ಮೊಟ್ಟಮೊದಲು ಪೋರ್ತುಗೀಜ ವ್ಯಾಪಾರಸ್ಥರು ಬಂದರು. ಈ ದಂಡೆಯು ಕೊಂಕಣ ಪಟ್ಟಿಗಿಂತ ಹೆಚ್ಚು ಅಗಲಾಗಿರುವದರಿಂದ, ಮಂಗಳೂರಿನ ವರೆಗೆ ಸಮುದ್ರ ದಂಡೆಗುಂಟ ರೇಲುದಾರಿ ಇರುತ್ತದೆ.

ಸಮುದ್ರದ ದಂಡೆಗುಂಟ ನೂರಾರು ಮೈಲುಗಳ ವರೆಗೆ ತೆಂಗಿನ ಬನಗಳು ಒಂದೇ ಸವನೆ ಹಬ್ಬಿರುತ್ತವೆ. ಗುಡ್ಡಗಳ ಮೇಲೆ ದಟ್ಟಾದ ಅಡವಿಗಳಿರುತ್ತವೆ. ಇಲ್ಲಿಯ ಹವೆಯು ರಬ್ಬರಿನ ಗಿಡಗಳಿಗೆ ಒಳ್ಳೆಯದಾಗಿರುವದರಿಂದ ಸರಕಾರದವರ ನೇತೃತ್ವದ ಕೆಳಗೆ ದೊಡ್ಡ ದೊಡ್ಡ ರಬ್ಬರಿನ ಹಳವುಗಳನ್ನು ಬೆಳಿಸಹತ್ತಿದ್ದಾರೆ. ಘಟ್ಟದ ಮೇಲೆ ಕಾಫಿಯ ದೊಡ್ಡ ದೊಡ್ಡ ತೋಟಗಳಾಗಿರುತ್ತವೆ. ದಕ್ಷಿಣದ ತುದಿಯಲ್ಲಿ ಚಹದ ತೋಟಗಳಾದರೂ ಆಗಿರುತ್ತವೆ. ಮಂಗಳೂರಿನಿಂದ ಹೋಗುವಷ್ಟು ಕಾಫಿಯು ಬೇರೆ ಯಾವ ಬಂದರಗಳಿಂದಲೂ ಹೋಗುವದಿಲ್ಲ.

ಸಮುದ್ರದ ದೊಡ್ಡ ದೊಡ್ಡ ಒತ್ತುಗಳು ಅಲ್ಲಲ್ಲಿ ಕಂಡುಬರುತ್ತವೆ. ಬಹುತರವಾಗಿ ಪ್ರತಿಯೊಂದು ಒತ್ತಿನ ಮೇಲೆ ಬಂದರಗಳು ಇದ್ದೇ ಇರುತ್ತವೆ. ಡೋಣಿಗಳಲ್ಲಿ ಬುಂದು, ಕೊಬ್ಬರಿ ಎಣ್ಣೆ, ಕಾತಿಯ ಉತ್ಕೃಷ್ಟವಾದ ತಟ್ಟು ಮುಂತಾದ ಪದಾರ್ಥಗಳನ್ನು ಹೇರಿಕೊಂಡು, ದಂಡೆಯಗುಂಟ ವ್ಯಾಪಾರವು

ಸಾಗುತ್ತಿದೆ. ಮಲಬಾರಿಗಳು ತೆಂಗಿನ ಬನದೊಳಗೆ ಮುಖ್ಯವಾಗಿ ಕೆಲಸ ಮಾಡುವರು. ತೆಂಗಿನ ಗಿಡಗಳನ್ನು ಹತ್ತಿ ಕಾಯಿಗಳನ್ನು ಹರಿಯುವದು, ಅವುಗಳ ಮೇಲಿನ ತೋಟಿಯನ್ನು ತೆಗೆದು ಅದರ ಕಾತಿಯನ್ನು ತಯಾರಿಸುವದು, ಕೊಬ್ಬರಿಯ ಗಿಟಕುಗಳನ್ನು ತೆಗೆಯುವದು ಮತ್ತು ಹಗ್ಗ ಮುಂತಾದವುಗಳನ್ನು ತಯಾರಿಸುವದು ಅವರ ಉದ್ಯೋಗಗಳಾಗಿರುತ್ತವೆ. ಕೊಬ್ಬರಿಯಿಂದ ಎಣ್ಣೆ ತೆಗೆಯುವದು, ಸೋಪುಗಳನ್ನು ಮಾಡುವದು, ವನಸ್ಪತಿ ತುಪ್ಪ (ಕೃತ್ರಿಮ ತುಪ್ಪ) ತಯಾರಿಸುವದು ಬಹಳವಾಗಿ ನಡೆಯುತ್ತವೆ. **ಟಾಟಾಪುರಮ್** ಎಂಬಲ್ಲಿ ಟಾಟಾ ಕಂಪನಿಯವರ ಕೊಬ್ಬರಿ ಎಣ್ಣೆಯ ದೊಡ್ಡ ಕಾರಖಾನೆಯುಂಟು. ಪರಟಿಗಳಿಂದ ಹಲವು ಪದಾರ್ಥಗಳನ್ನು ಮಾಡುವರು. ಬಟ್ಟಲ, ಸೌಟು, ಡಬ್ಬಿ, ಗುಡುಗುಡಿ, ಮುಂತಾದ ಪದಾರ್ಥಗಳನ್ನು ಈಗ ಪರಟಿಗಳಿಂದ ಮಾಡುತ್ತಾರೆ.

ಮಲಬಾರಿಗಳು ಬಹುತರವಾಗಿ ತೆಂಗಿನ ತೋಟಗಳಲ್ಲಿಯೇ ಮನೆ ಮಾಡಿಕೊಂಡಿರುತ್ತಾರೆ. ಅವರ ಗುಡಿಸಲುಗಳು ತೆಂಗಿನ ಗರಿಗಳಿಂದಲೇ ಮಾಡಲ್ಪಟ್ಟಿರುತ್ತವೆ. ಅವುಗಳ ಮೇಲೆ ಇಳಿಜಾರಾದ ಚಪ್ಪರವನ್ನು ಮಾಡಿರುತ್ತಾರೆ. ಚಪ್ಪರವನ್ನು ಸಹ ಗರಿಗಳನ್ನು ಹಚ್ಚಿಯೇ ಮಾಡಿರುತ್ತಾರೆ. ಯಾಕಂದರೆ ಮಳೆ ಬಹಳ.

ಗಂಡಸರು ತಲೆಗೊಂದು ವಸ್ತ್ರ, ಮೈಯಲ್ಲಿ ಅಂಗಿ, ಉಟ್ಟುಕೊಳ್ಳಲಿಕ್ಕೆ ಒಂದು ಸಣ್ಣ ಲುಂಗಿ ಈ ಪ್ರಕಾರ ಉಡುಪುಗಳನ್ನು ಧರಿಸುತ್ತಾರೆ. ಹೆಂಗಸರು ಸೀರೆ ಕುಪ್ಪಸಗಳನ್ನು ಹಾಕಿಕೊಳ್ಳುತ್ತಾರೆ. ಹವೆಯು ಉಷ್ಣವಾಗಿರುವದರಿಂದಲೂ ಮೈ ಯಾವಾಗಲೂ ಬೆವರುವದರಿಂದಲೂ ಅವರಿಗೆ ಹೆಚ್ಚಿನ ಉಡುಪುಗಳ ಅವಶ್ಯಕತೆ ಇರುವದಿಲ್ಲ. ಅಕ್ಕಿ, ಮೀನ, ಕೊಬ್ಬರಿ, ಮೆಣಸು ಮುಂತಾದ ಪದಾರ್ಥಗಳೇ ಇವರ ಮುಖ್ಯವಾದ ಆಹಾರಗಳಾಗಿರುತ್ತವೆ. ಮಲಬಾರವು (ದಕ್ಷಿಣ ಕೊಂಕಣ) ಮಸಾಲೆಗಳ ಬಗ್ಗೆ ಪ್ರಸಿದ್ಧವಾಗಿರುತ್ತದೆ. ವ್ಯಾಪಾರದ ಸಲುವಾಗಿ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಿಂದ ಎಷ್ಟೋ ಜನರು ಇಲ್ಲಿ ಬಂದಿರುತ್ತಾರೆ.

ಮಂಗಳೂರಿನ ಹತ್ತರ ಉಪ್ಪಿನ ಆಗರಗಳೂ, ಹಂಚಿನ ಕಾರಖಾನೆಗಳೂ ಪ್ರಸಿದ್ಧವಾಗಿರುತ್ತವೆ. ಇಲ್ಲಿಯ ಕನ್ನಡ ಛಾಪಖಾನೆಗಳು ಹಿಂದುಸ್ಥಾನದಲ್ಲೆಲ್ಲ ಪ್ರಸಿದ್ಧವಾಗಿರುತ್ತವೆ. ಸಾಣಿಕಟ್ಟೆಯ ಹತ್ತರ ಉಪ್ಪಿನ ಆಗರಗಳು ಬಹಳ

ವಿರುತ್ತವೆ. ಉತ್ತರ ಕೊಂಕಣಕ್ಕಿಂತ ಇಲ್ಲಿ ಜನವಸತಿಯು ಹೆಚ್ಚಾಗಿರುತ್ತದೆ. ಹವೆಯು ಹೆಚ್ಚು ಉಷ್ಣವಾದದ್ದಿರುತ್ತದೆ. ಉದ್ಯೋಗವ್ಯವಸಾಯಗಳಾದರೂ ಕೊಂಕಣಕ್ಕಿಂತ ಮಲಬಾರದಲ್ಲಿ ಹೆಚ್ಚು. ಇತ್ತಲಾಗಿ ಮಲಬಾರಿಗಳು ಸೈನ್ಯದಲ್ಲಿಯೂ, ವಿಮಾನದಳದಲ್ಲಿಯೂ ಹೆಚ್ಚಾಗಿ ಕಂಡುಬರುತ್ತಾರೆ.

**ಮಂಗಳೂರು, ಟೆಲ್ಲಿಚೇರಿ, ಕಾಲಿಕತ್ತ, ಕೋಚಿನ, ಅಲೆಪ್ಪಿ, ಕ್ವಿಲೋನ** ಎಂಬವು ಮುಖ್ಯ ಬಂದರುಗಳು. ಇವುಗಳಿಂದ ಮಸಾಲೆಯ ಸಾಮಾನು, ಕೊಬ್ಬರಿ, ಎಣ್ಣೆ, ಮೀನಿನ ಗೊಬ್ಬರ, ಗಂಧದ ಕಟ್ಟಿಗೆ, ಕಾತಿಯ ಸಾಮಾನುಗಳು ಮುಖ್ಯವಾಗಿ ರಫ್ತಾಗುತ್ತವೆ.

## ಪ್ರಶ್ನೆಗಳು

೧. ಮಲಬಾರಿಗಳ ಮುಖ್ಯ ಉದ್ಯೋಗಗಳು ಯಾವವು?
೨. ದಕ್ಷಿಣ ಕೊಂಕಣವನ್ನು ಉತ್ತರ ಕೊಂಕಣಕ್ಕೆ ಹೋಲಿಸಿರಿ.
೩. ದಕ್ಷಿಣ ಕೊಂಕಣದೊಳಗಿನ ಮುಖ್ಯವಾದ ಬಂದರುಗಳು ಯಾವವು? ಅವುಗಳಿಂದ ರಫ್ತಾಗುವ ಸರಕುಗಳು ಯಾವವು?
೪. ಇಲ್ಲಿಯ ಹಳವುಗಳಲ್ಲಿ ಬೆಳೆಯುವ ಮುಖ್ಯವಾದ ಗಿಡಗಳು ಯಾವವು?
೫. ಮಲಬಾರಿಗಳ ಮನೆಯನ್ನೂ, ಉಡುಪನ್ನೂ ವರ್ಣಿಸಿರಿ.

ಪಾಠ ೧೯

## ದೇಶ (ಮಹಾರಾಷ್ಟ್ರ)

ಸಹ್ಯಾದ್ರಿ ಪರ್ವತದಿಂದ ಮಹಾರಾಷ್ಟ್ರದೊಳಗೆ ಕೊಂಕಣ ಮತ್ತು ದೇಶಗಳೆಂದು ಎರಡು ಭಾಗಗಳಾಗಿರುತ್ತವೆ. ಕೊಂಕಣದ ಬಗ್ಗೆ ಈ ಮೊದಲೇ ನೀವು ಓದಿರುತ್ತೀರಿ. ನೈಋತ್ಯ ಮನ್ಸೂನಗಾಳಿಗಳಿಂದ ಬರುವ ಮಳೆಯು ಪಶ್ಚಿಮ ಘಟ್ಟದ ಪಶ್ಚಿಮದ ಮಗ್ಗಲಿನ ಮೇಲೆ ಹೆಚ್ಚಾಗಿ ಬೀಳುವದರಿಂದ, ಘಟ್ಟದ ಮೇಲಿರುವ ಮಹಾರಾಷ್ಟ್ರದೊಳಗೆ ಕೊಂಕಣದೊಳಗಿನ ನಾಲ್ಕನೇ ಪಾಲಿನಷ್ಟು ಸಹ ಮಳೆಯು ಆಗುವದಿಲ್ಲ. ಪಶ್ಚಿಮದಿಂದ ಪೂರ್ವಕ್ಕೆ ಹೋದ ಹಾಗೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ಮಹಾರಾಷ್ಟ್ರವು ಡೆಕ್ಕನ್ ತಪ್ಪಲಿನ ಮೇಲಿರುವದರಿಂದ ಅದು ಸಮುದ್ರ ಸಪಾಟಿಯಿಂದ ಸುಮಾರು ೨೦೦೦ ಫೂಟು ಎತ್ತರದ ಮೇಲಿರುತ್ತದೆ. ಆದ್ದರಿಂದ ಇಲ್ಲಿಯ ಹವೆಯು ಒಣದಾಗಿರುವದು.

ಮಹಾರಾಷ್ಟ್ರವು ಪಶ್ಚಿಮದಿಂದ ಪೂರ್ವಕ್ಕೆ ಇಳುಕಲಾಗಿರುತ್ತದೆ. ಆದ್ದರಿಂದ ಇಲ್ಲಿಯ ಹೊಳೆಗಳೆಲ್ಲ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತವೆ. ಇಲ್ಲಿಯ ಭೂಮಿಯು ಕರೇ ಮಣ್ಣಿನಿಂದಾದ್ದರಿಂದ ಬೆಳೆಯುಳ್ಳದ್ದಿರುತ್ತದೆ. ನೀರಿನ ಸೌಕರ್ಯವಿದ್ದಲ್ಲಿ ಬೆಳೆಗಳು ಚೆನ್ನಾಗಿ ಬರುತ್ತವೆ. ಕೊಂಕಣದೊಳಗಿಂದ ದೇಶದ ಮೇಲೆ ಬರಲಿಕ್ಕೆ ಘಟ್ಟದ ಮಾರ್ಗಗಳಿರುತ್ತವೆ. ಅವುಗಳಲ್ಲಿ ಬೋರಘಟ್ಟ, ಅಂಬೋಲೀ, ಅಂಬಾ ಮುಂತಾದ ಮಾರ್ಗಗಳು ಪ್ರಸಿದ್ಧವಾಗಿರುತ್ವವೆ. ಥಳ ಮತ್ತು ಬೋರ ಘಟ್ಟಗಳೊಳಗಿಂದ ರೇಲುಮಾರ್ಗಗಳನ್ನು ಸಹಮಾಡಿರುತ್ತಾರೆ. ಪುಣೆ, ಸತಾರಾ, ನಾಶೀಕ ಜಿಲ್ಲೆಗಳ ಪಶ್ಚಿಮಭಾಗವು ಘಟ್ಟದ ಸಮೀಪಕ್ಕಿರುವದರಿಂದ ಮಳೆ ಹೆಚ್ಚಾಗುತ್ತದೆ. ಸಹ್ಯಾದ್ರಿ ಪರ್ವತದ ಮೇಲೆ ಕೆಲವು ಕಡೆಯಲ್ಲಿ ಹಳವುಗಳಿದ್ದರೂ, ಬೇರೆ ಕೆಲವು ಗುಡ್ಡಗಳು ಬೋಳಾಗಿ ನಿಂತಿರುತ್ತವೆ. ಹಲವು ಗುಡ್ಡಗಳ ತುದಿಯಲ್ಲಿ ಸಪಾಟಾದ ಪ್ರದೇಶವಿದ್ದು ಅಲ್ಲಿ ಹಳೇ ಕಾಲದ ಎಷ್ಟೋ ಕೋಟೆಗಳಿರುತ್ತವೆ. ಪುರಂದರ, ಸಿಂಹಗಡ, ಪ್ರತಾಪಗಡ, ಪನ್ಹಾಳಾ ಮುಂತಾದ ಎಷ್ಟೋ ಪ್ರಸಿದ್ಧವಾದ ಕೋಟೆಗಳಿವೆ. ಅಲ್ಲಿ ನೀರು ವಿಪುಲವಾಗಿದ್ದು ಬೇಸಿಗೆಯಲ್ಲಿ ಸಹ ಹವೆಯು ತಂಪಾಗಿರುತ್ತದೆ. ಸಹ್ಯಾದ್ರಿ ಪರ್ವತದ



ಆಕೃತಿ ೪೫ ಮಹಾರಾಷ್ಟ್ರದ ಸ್ವಾಭಾವಿಕ ವಿಭಾಗಗಳು

ಮೇಲೆ ತಂಪು ಹವೆಯ ಮತ್ತು ಸೃಷ್ಟಿ ಸೊಬಗಿನ ಎಷ್ಟೋ ಸ್ಥಳಗಳಿರುತ್ತವೆ. ಅವುಗಳಲ್ಲಿ ಮಾಥೇರಾನ, ಮಹಾಬಳೇಶ್ವರ, ಪಂಚಗಣಿ ಎಂಬವು ಮುಖ್ಯವಾಗಿರುತ್ತವೆ. ಅಲ್ಲಿ ಶ್ರೀಮಂತ ಜನರು ಬೇಸಿಗೆಯಲ್ಲಿ ಹೋಗಿ ನಿಲ್ಲುತ್ತಾರೆ. ಮಹಾಬಳೇಶ್ವರವು ೪೦೦೦ ಫೂಟು ಎತ್ತರದಲ್ಲಿದ್ದು, ಕೃಷ್ಣಾನದಿಯ ಉಗಮಸ್ಥಳವಾಗಿರುತ್ತದೆ.



ಆಕೃತಿ ೪೬ ಪುರಂದರ ಕೋಟೆ

ಪರ್ವತದ ಅಡಿಯಲ್ಲಿ ಎಷ್ಟೋ ಹಳ್ಳಿಗಳಿರುತ್ತವೆ. ಅಲ್ಲಿ ಮಳೆಯ ಪ್ರಮಾಣವು ೫೦ ಇಂಚಿನಷ್ಟು ಇರುವದರಿಂದ ಭತ್ತವು ಚನ್ನಾಗಿ ಬೆಳೆಯುತ್ತದೆ. ಪುಣೆಯ ಸುತ್ತಲೂ ಬೆಳೆಯುವ 'ಅಂಬೆಮೋಹರ' ಎಂಬ ಜಾತಿಯ ಅಕ್ಕಿಯು ಪ್ರಸಿದ್ಧವಾಗಿರುತ್ತದೆ.

ಇತ್ತಲಾಗಿ ಗುಡ್ಡಗಾಡು ಪ್ರದೇಶದೊಳಗೆ ಹೊಳೆಗಳಿಗೆ ಅಣೆಕಟ್ಟುಗಳನ್ನು ಕಟ್ಟಿ, ಕಾಲುವೆಗಳನ್ನೂ, ವಿದ್ಯುತ್ ಕಾರಖಾನೆಗಳನ್ನೂ ಮಾಡಿದ್ದಾರೆ. ಲೋಣಾವಳೆಯ ಟಾಟಾ ಕಂಪನಿಯವರ ಅಣೆಕಟ್ಟು, ನೀರಾ ಹೊಳೆಯ ಮೇಲಿನ ಭಾಡಗರದ ಅಣೆಕಟ್ಟುಗಳು ಪ್ರಸಿದ್ಧವಾಗಿರುತ್ತವೆ. ಸರಕಾರದವರು ಇನ್ನೂ ಕೆಲವು ಅಣೆಕಟ್ಟುಗಳನ್ನು ಕಟ್ಟತಕ್ಕವರಿದ್ದಾರೆ.

ಮಹಾರಾಷ್ಟ್ರದೊಳಗಿನ ಗೋದಾವರೀ, ಕೃಷ್ಣಾ, ಭೀಮಾ ಹೊಳೆಗಳ ಕೊಳ್ಳಗಳು ಬೆಳೆಯುಳ್ಳವುಗಳಾಗಿದ್ದು ಅಲ್ಲಿ ಜನವಸತಿಯಾದರೂ ದಟ್ಟಾಗಿರುತ್ತದೆ. ದೇಶದ ಮೇಲೆ ಪೂರ್ವ ಪಶ್ಚಿಮವಾಗಿ ಗುಡ್ಡಗಳ ಸಾಲುಗಳಿದ್ದು ಅವುಗಳ ನಡುವೆ ಹೊಳೆಗಳು ಹರಿಯುತ್ತವೆ. ಇಲ್ಲಿ ಮಳೆಯು ಕಡಿಮೆ




ಆಕೃತಿ ೪೭ ಗೋದಾವರಿಯ ಕೊಳ್ಳ

ಯಾಗಿರುವದರಿಂದ ಈ ಗುಡ್ಡಗಳ ಮೇಲೆ ಗಿಡಗಂಟಿಗಳು ಬೆಳೆಯುವದಿಲ್ಲ. ಹಳವುಗಳಂತೂ ಇರುವದೇ ಇಲ್ಲ. ಖಾನದೇಶವು ಇಂಥದೊಂದು ಗುಡ್ಡದ ಸಾಲಿನಿಂದ ಬೇರ್ಪಡಿಸಲ್ಪಟ್ಟಿದೆ.

**ಗೋದಾವರಿಯ ಕೊಳ್ಳ:—** ಈ ಕೊಳ್ಳದೊಳಗೆ ನಾಶೀಕ ಜಿಲ್ಲೆ ಮತ್ತು ಅಹಮದನಗರ ಜಿಲ್ಲೆಯ ಕೆಲ ಭಾಗವು ಬರುತ್ತವೆ. ಪಶ್ಚಿಮದಿಂದ ಪೂರ್ವಕ್ಕೆ ಹೋದ ಹಾಗೆ ಮಳೆಯ ಪ್ರಮಾಣವು ಕಡಿಮೆಯಾಗುತ್ತದೆ. ಪಶ್ಚಿಮ ಭಾಗದೊಳಗೆ ಸೆಜ್ಜೆ, ಪೂರ್ವ ಭಾಗದೊಳಗೆ ಗೋದಿಯ ಬೆಳೆಯು ಚನ್ನಾಗಿ ಬರುತ್ತದೆ. ಈ ಕೊಳ್ಳದ ಪೂರ್ವ ಭಾಗವು ಹೆಚ್ಚು ಬೆಳೆಯುಳ್ಳದ್ದು. ಆದರೆ ಮಳೆಯು ಕಡಿಮೆ. ಆದರೂ ಇತ್ತಲಾಗಿ ಕಾಲುವೆಗಳನ್ನು ಮಾಡಿದ್ದರಿಂದ ಈ ಭಾಗವು ಹೆಚ್ಚು ಊರ್ಜಿತಾವಸ್ಥೆಗೆ ಬರಹತ್ತಿದೆ. ಅಲ್ಲಿ ಕಬ್ಬು,

ನೆಲಗಡಲೆ, ಗೋದಿ, ಮೋಸಂಬಿ, ನೀರ ಜೋಳವೆಂಬ ಹುಲ್ಲು ಮುಂತಾದ ಬೆಳೆಗಳು ವಿಪುಲವಾಗಿ ಬೆಳೆಯುತ್ತವೆ. ಇವುಗಳಲ್ಲಿ ಕಬ್ಬು ಮಹತ್ವವಾದದ್ದು. ಕಾಲುವೆಗಳಿಲ್ಲದ ಸ್ಥಳಗಳಲ್ಲಿ ಒಣಬೆಳೆಗಳನ್ನು ಬೆಳೆಯುತ್ತಾರೆ. ನಾಶೀಕದ ಹತ್ತರ ದ್ರಾಕ್ಷೆಯ ತೋಟಗಳು ಬಹಳ ಉಂಟು. ಉಷ್ಣವಾದ ಬೇಸಿಗೆ,



ಆಕೃತಿ ೪೮ ಗೋದಾವರೀ ಹೊಳೆಯ ಮೇಲಿನ ನೋಟ (ನಾಶೀಕ)

ಹೆಚ್ಚಾದ ಚಳಿ ಮತ್ತು ಒಣ ಹವೆ ಇವು ದ್ರಾಕ್ಷೆಯ ಬೆಳೆಗೆ ಅನುಕೂಲವಾಗಿರುತ್ತವೆ. ಮತ್ತು ಈ ಪ್ರಕಾರದ ಹವೆಯು ಅಲ್ಲಿ ಇರುತ್ತದೆ. ಅಲ್ಲಿ ಬೆಳೆದ ದ್ರಾಕ್ಷೆಯು ಮುಂಬಯಿಗೆ ಸುಲಭವಾಗಿ ರೇಲಿನಿಂದ ಹೋಗುತ್ತವೆ.

ಈ ಕೊಳ್ಳದೊಳಗೆ ಹೇಳಿಕೊಳ್ಳುವಂಥ ಪಟ್ಟಣಗಳು ಇರುವದಿಲ್ಲ. ಜನವಸತಿಯು ಹಳ್ಳಿಗಳಲ್ಲಿಯೇ ಇರುತ್ತದೆ. ನಾಶೀಕ ಪಟ್ಟಣವು ಪ್ರಸಿದ್ಧವಾದ ಕ್ಷೇತ್ರವಾಗಿದ್ದು ಬಹು ಪುರಾತನಕಾಲದಿಂದ ಪ್ರಸಿದ್ಧವಾಗಿರುತ್ತದೆ. ಈ ಜಿಲ್ಲೆಯೊಳಗಿನ ರೇಶಿಮೆಯ ಅರಿವೆಗಳು ಪ್ರಸಿದ್ಧವಾಗಿರುತ್ತವೆ. ಕೋಪರಗಾಂವ ಎಂಬ ಪಟ್ಟಣವು ಇತ್ತಲಾಗಿ ಊರ್ಜಿತಾವಸ್ಥೆಯನ್ನು ಹೊಂದುತ್ತಲಿದೆ. ಇಲ್ಲಿ ಸಕ್ಕರೆಯ ಕಾರಖಾನೆಗಳು ಇರುತ್ತವೆ.

**ಭೀಮಾ ಹೊಳೆಯ ಕೊಳ್ಳ:—** ಭೀಮಾ ಹೊಳೆಯೂ ಅದಕ್ಕೆ ಕೂಡುವ ಬೇರೆ ಸಣ್ಣ ಸಣ್ಣ ಹೊಳೆಗಳೂ ಕೂಡಿ ಈ ಕೊಳ್ಳವಾಗಿರುತ್ತದೆ.

ಈ ಹೊಳೆಯು ಮಹಾರಾಷ್ಟ್ರವನ್ನು ಬಿಟ್ಟು ಕರ್ನಾಟಕವನ್ನು ನೇರಿ ಕೃಷ್ಣೆಗೆ ಕೂಡುತ್ತದೆ. ಇದರೊಳಗೆ ಪುಣೆ, ಸೊಲ್ಲಾಪುರ, ಅಹಮ್ಮದನಗರದ ಕೆಲವು ಭಾಗಗಳು ಬರುತ್ತವೆ. ಈ ಭಾಗದೊಳಗಿನ ಜನವಸತಿಯಾದರೂ ಹಳ್ಳಿಗಳಲ್ಲಿಯೇ ಹೆಚ್ಚಾಗಿರುತ್ತದೆ. ಮುಖ್ಯ ಉದ್ಯೋಗವು ಒಕ್ಕಲತನವು.

ಆಕೃತಿ ೪೯ ಭೀಮಾ ನದಿಯ ಕೊಳ್ಳ

ಪಶ್ಚಿಮದಿಂದ ಪೂರ್ವಕ್ಕೆ ಹೋದಂತೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ಮಳೆಯ ಅನಿಶ್ಚಿತೆಯಿರುವದರಿಂದ ಒಕ್ಕಲಿಗರು ಎಷ್ಟೋ ಸಾರೆ ಕಷ್ಟಕ್ಕೀಡಾಗುತ್ತಾರೆ. ಆದರೂ ಅಲ್ಲಲ್ಲಿ ಸಣ್ಣದೊಡ್ಡ ಅಣೆಕಟ್ಟುಗಳನ್ನು ಕಟ್ಟಿ ನೀರಿನ ಸೌಕರ್ಯವನ್ನು ವದಗಿಸಿಕೊಟ್ಟಿರುತ್ತಾರೆ. ಮುಠಾ ಹೊಳೆಯ ಕಾಲುವೆಯಿಂದ ಕಾಯಿಪಲ್ಲೆಗಳನ್ನು ಬೆಳೆಯುತ್ತಾರೆ. ಹತ್ತರವೇ ಪುಣೆ ಪಟ್ಟಣವಿರುವದರಿಂದ ಅವುಗಳಿಗೆ ಬೆಲೆಯಾದರೂ ಚೆನ್ನಾಗಿ ಬರುತ್ತದೆ. ನೀರಾ ಕಾಲುವೆಯಿಂದ ಮುಖ್ಯವಾಗಿ ಕಬ್ಬು ಬೆಳೆಯುತ್ತದೆ. ಕಾಲುವೆಗಳಿಂದ ತೋಟಗಳಲ್ಲಿ ದುಡಿಯುವ ಒಕ್ಕಲಿಗನಿಗೂ, ಮೇಲಡವಿಯಲ್ಲಿ ದುಡಿಯುವ ಒಕ್ಕಲಿಗನಿಗೂ ಬಹಳ ಅಂತರವಿರುತ್ತದೆ. ತೋಟಪಟ್ಟಿ

ಗಳನ್ನು ಮಾಡುವವರಿಗೆ ಹಣವು ಸಾಕಷ್ಟು ಸಿಗುವದರಿಂದ ಅವರು ಅಂದವಾದ ಕೆಂಪು ಹಂಚಿನ ಮನೆಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಮೈತುಂಬ ಅಂದವಾದ ಬಟ್ಟೆಗಳನ್ನು ಧರಿಸುತ್ತಾರೆ. ಹಣವಿರುವದರಿಂದ ಅವರಲ್ಲಿ ಶಿಕ್ಷಣವಾದರೂ ಹೆಚ್ಚಾಗಿರುತ್ತದೆ. ಆದರೆ ಮೇಲಡವಿಯ ಒಕ್ಕಲಿಗರು ಬಡವರು. ಮೈಮೇಲೆ ಸಾಕಷ್ಟು ಅರಿವೆಗಳಿಲ್ಲ. ಮನೆಗಳು ಮಣ್ಣಿನವಾಗಿ ಹರಕುಮುರುಕಾಗಿರುತ್ತವೆ. ನಾಲ್ಕೆಂಟು ವರುಷದೊಳಗೆ ಒಮ್ಮೆ ತತಿಗೆ ಸರಿಯಾಗಿ ಮಳೆ ಬೀಳುತ್ತದೆ. ಅಷ್ಟರ ಮೇಲಿಂದಲೇ ಅವರ ಜೀವನವು ನಡೆಯಬೇಕಾಗುತ್ತದೆ. ಹೊಟ್ಟೆಗೆ ಏನೂ ಸಿಗದಿರುವಾಗ ಮನೆಮಾರು ಬಿಟ್ಟು ಕೂಲಿಕುಂಬಳಿ ಮಾಡಲಿಕ್ಕೆ ಪಟ್ಟಣಗಳ ಕಡೆಗೆ ಗುಳೇ ಕಟ್ಟಿಕೊಂಡು ಹೋಗುತ್ತಾರೆ.

**ಪುಣೆ** ಪಟ್ಟಣವು ಇತಿಹಾಸ ಪ್ರಸಿದ್ಧವಾದ ಸ್ಥಳವಿದ್ದು ಅಲ್ಲಿ ಎಷ್ಟೋ ಕಾಲೇಜುಗಳು ಇರುತ್ತವೆ. ಇತ್ತಲಾಗಿ ಅಲ್ಲಿ ಸ್ವತಂತ್ರವಾದ ವಿದ್ಯಾಪೀಠವನ್ನಾದರೂ ಸ್ಥಾಪಿಸಿದ್ದಾರೆ. **ಸೊಲ್ಲಾಪುರ**ವು ಎರಡನೇ ದೊಡ್ಡ ಪಟ್ಟಣವು. ಅಲ್ಲಿ ಅರಿವೆಯ ಗಿರಣಿಗಳೂ, ನೂಲಿನ ಗಿರಣಿಗಳೂ ಇರುತ್ತವೆ. ಈ ಭಾಗದೊಳಗೆ ಮಳೆ ಕಡಿಮೆಯಾಗುವದರಿಂದ ಹೊಲಗೆಲಸಕ್ಕಿಂತಲೂ ದುಡಿದು ಹೊಟ್ಟೇ ತುಂಬಿಕೊಳ್ಳುವ ಜನರೇ ಹೆಚ್ಚು. ಆದ್ದರಿಂದ ಇಲ್ಲಿಯ ಗಿರಣಿಗಳಲ್ಲಿ ಕೂಲಿಕಾರರ ಕೊರತೆಯು ಎಂದೂ ಬೀಳುವದಿಲ್ಲ.

ಈ ಕೊಳ್ಳದೊಳಗೆ ಬರುಹೋಗುವ ಮಾರ್ಗಗಳು ಚನ್ನಾಗಿರುತ್ತವೆ. ರೇಲುದಾರಿಗಳಾದರೂ ಇರುತ್ತವೆ. ಮುಂಬಯಿಂದ ಜೀ. ಐ. ಪೀ. (ಮಧ್ಯ ರೇಲ್ವೆ) ರೇಲು ಪುಣೆಯ ಮೇಲಿಂದ ಸೋಲಾಪುರ ಮಾರ್ಗವಾಗಿ ನಿಜಾಮ ರಾಜ್ಯದೊಳಗೆ ಹೋಗುತ್ತದೆ. ಪುಣೆಯಿಂದ ಸದರ್ನ ಮರಾಠಾ (ದಕ್ಷಿಣ ರೇಲ್ವೆ) ರೇಲ್ವೆದಾರಿಯು ಮಿರಜೆಯ ಮೇಲಿಂದ ಕರ್ನಾಟಕದೊಳಗೆ ಹೋಗಿರುತ್ತದೆ. ದೊಂಡದಿಂದ ಬಾರಾಮತಿಯ ವರೆಗೂ, ಮಿರಜೆಯಿಂದ ಪಂಢರಪೂರ, ಸೊಲ್ಲಾಪುರ, ಬಾರ್ಸಿಗಳ ವರೆಗೂ ರೇಲು ದಾರಿಗಳಿರುತ್ತವೆ.

**ಕೃಷ್ಣಾ ಹೊಳೆಯ ಕೊಳ್ಳ**:—ಕೃಷ್ಣಾನದಿಯು ಮಹಾಬಳೇಶ್ವರದಲ್ಲಿ ಹುಟ್ಟಿ, ಮಿರಜೆಯ ವರೆಗೆ ದಕ್ಷಿಣವಾಹಿನಿಯಾಗಿ, ಮುಂದೆ ಪೂರ್ವಕ್ಕೆ ಕರ್ನಾಟಕದೊಳಗೆ ಹರಿಯುತ್ತದೆ. ಇದರೊಳಗೆ ಉತ್ತರ ಮತ್ತು ದಕ್ಷಿಣ ಸತಾರೆ (ಸಾಂಗ್ಲೀ ಸಂಸ್ಥಾನ), ಕೊಲ್ಹಾಪೂರ ಜಿಲ್ಹೆಯ ಭಾಗಗಳು ಬರುತ್ತವೆ.

ಈ ಕೊಳ್ಳದೊಳಗೆ ಸಾಕಷ್ಟು ಮಳೆ ಬೀಳುತ್ತದೆ. ಇಲ್ಲಿ ಕರೇ ಭೂಮಿಯಿದ್ದು ಬೆಳೆಯುಳ್ಳದ್ದಿರುತ್ತದೆ. ಹೊಳೆಗಳ ಎರಡೂ ಮಗ್ಗಲಿನ ಪ್ರದೇಶಗಳಂತೂ ಬಹಳ ಫಲವತ್ತಾಗಿರುತ್ತವೆ. ಹೊಳೆಸಾಲಿನ ಭೂಮಿಗಳಲ್ಲಿ ಹಿಂಗಾರಿಯ ಬೆಳೆಯನ್ನೇ ಮುಖ್ಯವಾಗಿ ತೆಗೆಯುತ್ತಾರೆ. ಈ ಭಾಗದೊಳಗಿನ ಒಕ್ಕಲಿಗರು ಉದ್ಯೋಗಿಗಳಾಗಿರುತ್ತಾರೆ. ಮೇಲಡವಿಯ ಭೂಮಿಗಳಾದರೂ ಬೆಳೆಯುಳ್ಳವುಗಳಾಗಿರುತ್ತದೆ. ಅಲ್ಲಿ ಹಿಂಗಾರಿ ಮುಂಗಾರಿ ಬೆಳೆಗಳು ಬರುತ್ತವೆ. ಜೋಳ, ಸೆಜ್ಜೆ, ನೆಲಗಡಲೆ, ಅಡಗಾಳುಗಳು, ಗೋದಿ, ಕಡಲೆ, ಅರಸಿಣ, ತಂಬಾಕು ಮುಂತಾದ ಬೆಳೆಗಳು ಬರುತ್ತವೆ. ಒಕ್ಕಲಿಗರು ಮೃಗಮಳೆಗೆ ಹೊಲದೊಳಗೆ ಗುಡಿಸಲುಗಳಲ್ಲಿ ನಿಂತು ಹೋಳೀ ಹುಣ್ಣಿವೆಯಾದ ಬಳಿಕ ರಾಶೀ ತೆಗೆದುಕೊಂಡೇ ಮನೆಗೆ ಬರುತ್ತಾರೆ. ಇಲ್ಲಿ ಒಕ್ಕಲತನವು ಚೆನ್ನಾಗಿ ಸಾಗುವದರಿಂದ ಇಲ್ಲಿಯ ಒಕ್ಕಲಿಗನು ಸುಖದಿಂದ ಇರುತ್ತಾನೆ. ಇಲ್ಲಿ ಹೇಳಿಕೊಳ್ಳುವಂಥ ಪಟ್ಟಣಗಳಿರುವದಿಲ್ಲ. **ಸಾಂಗ್ಲೀ, ಕೊಲ್ಹಾಪುರ** ಇವು ಮುಖ್ಯವಾದ ಪೇಟೆಯ ಸ್ಥಳಗಳಾಗಿರುತ್ತವೆ. ಓಗಲೇವಾಡಿಯಲ್ಲಿ ಕಾಜಿನ ಕಾರಖಾನೆ ಇದ್ದು, ಕಿರ್ಲೋಸ್ಕರವಾಡೀ ಮತ್ತು ಸತಾರ ರೋಡಿನ ಮೇಲೆ ಕಬ್ಬಿಣದ ನೇಗಿಲು, ಪಲ್ಲಂಗ, ಕುರ್ಚಿ ಮುಂತಾದ ಸರಕು

ಆಕೃತಿ ೫೦ ಕೃಷ್ಣೆಯ ಕೊಳ್ಳ



ಆಕೃತಿ ೫೧ ಜೋಳದ ಬೆಳೆ (ಮುಂಗಾರಿ) ಮಹಾರಾಷ್ಟ್ರದ ಒಕ್ಕಲಿಗನು

ಗಳನ್ನು ಮಾಡುವ ಕಾರಖಾನೆಗಳುಂಟು. ಒಕ್ಕಲತನವೇ ಮುಖ್ಯವಾದ ಉದ್ಯೋಗವು. ಕೊಲ್ಹಾಪುರದಲ್ಲಿ ಸಕ್ಕರೆಯ ಕಾರಖಾನೆಯು ಇರುತ್ತದೆ. ಕೃಷ್ಣೆಯ ಕೊಳ್ಳದ ಆಚೆಯು, ಅಂದರೆ ಪೂರ್ವಭಾಗದಲ್ಲಿ ಮಳೆ ಕಡಿಮೆ. ಹವೆಯು ಉಷ್ಣವಾದದ್ದು. ಇಲ್ಲಿ ಮುಖ್ಯವಾಗಿ ಹಿಂಗಾರಿಯ (ರಬ್ಬೀ) ಬೆಳೆಯನ್ನೇ ಬೆಳೆಯುತ್ತಾರೆ.



ಆಕೃತಿ ೫೨ ಹತ್ತಿಯ ಕಾಯಿ

**ಖಾನದೇಶ :**—ಇದರಲ್ಲಿ ಪೂರ್ವ ಮತ್ತು ಪಶ್ಚಿಮ ಖಾನದೇಶಗಳೆಂದು ಎರಡು ಜಿಲ್ಲೆಗಳಿರುತ್ತವೆ. ಗೋದಾವರಿಯ ಉತ್ತರಕ್ಕಿರುವ ಸಾತಮಾಳದ ಗುಡ್ಡಗಳ ಆಚೆಗೆ ತಾಪೀ ನದಿಯ ಕೊಳ್ಳದೊಳಗೆ ಈ ಪ್ರದೇಶವು ಬರುತ್ತದೆ. ತಾಪೀ ಹೊಳೆಯ ದಂಡೆಯಿಂದ ಗುಡ್ಡದ ಅಡಿಯ ವರೆಗಿನ ಪ್ರದೇಶವು ಅತಿ ಬೆಳೆಯುಳ್ಳದ್ದಿರುತ್ತದೆ. ಇಲ್ಲಿ ಮುಖ್ಯವಾಗಿ ಹತ್ತಿಯು ಬೆಳೆಯುತ್ತದೆ. ಪಶ್ಚಿಮ ಖಾನದೇಶದಲ್ಲಿ ಮಳೆ ಹೆಚ್ಚು, ಹವೆ ಅನಾರೋಗ್ಯಕರವಾದದ್ದು. ಆದರೆ ಪೂರ್ವ ಖಾನದೇಶದ ಹವೆಯು ನಿರೋಗಿಯಾದದ್ದು. ಈ ಎರಡೂ ಭಾಗಗಳು ಸಮುದ್ರದಿಂದ ದೂರದಲ್ಲಿರುವದರಿಂದ ಹವೆಯು ವಿಷಮವಾಗಿರುತ್ತದೆ.

ಖಾನದೇಶದೊಳಗೆ ಉಮರಾ ಜಾತಿಯ ಹತ್ತಿಯು ವಿಶೇಷವಾಗಿ ಬೆಳೆಯುತ್ತದೆ. ಹತ್ತಿಗೆ ಬೇಡಿಕೆಯಾದರೂ ಹೆಚ್ಚಾಗಿರುವದರಿಂದ ಇಲ್ಲಿಯ ಒಕ್ಕಲಿಗರು ಸುಸ್ಥಿತಿಯಲ್ಲಿರುತ್ತಾರೆ. ಹತ್ತಿಯನ್ನು ಅರೆಯುವ ಮತ್ತು ಗಂಟು ಕಟ್ಟುವ ಎಷ್ಟೋ ಕಾರಖಾನೆಗಳಿರುತ್ತವೆ. ಇತ್ತಲಾಗಿ ಅಮಳನೇರ, ಜಳಗಾಂವ ಮುಂತಾದ ಪಟ್ಟಣಗಳಲ್ಲಿ ಅರಿವೆಯ ಗಿರಣಿಗಳಾಗಿರುತ್ತವೆ. ಇಲ್ಲಿ ಕೈಮಗ್ಗದ ಮೇಲಿನ ಅರಿವೆಯಾದರೂ ಬಹುದೊಡ್ಡ ಪ್ರಮಾಣದಿಂದ ಹೊರಡುತ್ತದೆ.

ಪಶ್ಚಿಮ ಭಾಗದಲ್ಲಿ ಮಳೆ ಹೆಚ್ಚಾಗುವದರಿಂದ ಅಲ್ಲಿ ಭತ್ತವು ಬೆಳೆಯುತ್ತದೆ. ಇದಲ್ಲದೇ ಜೋಳ, ಸಜ್ಜೆ, ಬೇಳೆಕಾಳುಗಳು, ಎಣ್ಣೆ ಕಾಳುಗಳು ಚೆನ್ನಾಗಿ ಬೆಳೆಯುತ್ತವೆ. ಖಾನದೇಶದೊಳಗೆ ಕಾಲುವೆಗಳಿರುವದಿಲ್ಲ.

ಆದ್ದರಿಂದ ಸಂಪೂರ್ಣವಾಗಿ ಮಳೆಯ ಮೇಲೆಯೇ ಅವಲಂಬಿಸಿರಬೇಕಾಗುತ್ತದೆ. ಮಳೆಯು ನಿಯಮಿತವಾಗಿ ಆಗುವದರಿಂದ ಬೆಳೆ ಕೇಡಾಗುವ ಅಂಜಿಕೆ ಇರುವದಿಲ್ಲ.

ಈ ಭಾಗದೊಳಗಿನ ಒಕ್ಕಲಿಗನು ಮಧ್ಯಮ ಆಕಾರದವನಾಗಿದ್ದರೂ ಗಟ್ಟಿಗನೂ, ದುಡಿಯುವವನೂ ಆಗಿರುತ್ತಾನೆ. ಜೋಳದ ರೊಟ್ಟಿ, ಝುಣಕ, ಉಳ್ಳೇಗಡ್ಡಿ, ಬಳ್ಳೊಳ್ಳಿಯ ಖಾರ ಇವೇ ಅವನ ಮುಖ್ಯವಾದ ಆಹಾರಗಳು. ಹೊಲದೊಳಗೆ ಬೆಳಸಿಯು ಬಂದ ಕೂಡಲೆ ಅವನು ಅದರ ಮೇಲೆಯೇ ತನ್ನ ನ್ಯಾರಿ (ಮುಂಜಾವಿನ ಊಟ) ಯನ್ನು ಮಾಡುತ್ತಾನೆ. ಇಲ್ಲಿ ಕಣಿಕಿ, ತವುಡು, ಹುಲ್ಲು ಮುಂತಾದವುಗಳು ಸಾಕಷ್ಟು ಸಿಗುವದರಿಂದ, ಇಲ್ಲಿಯ ದನಗಳು ಪುಷ್ಟವಾಗಿದ್ದು ಸಾಕಷ್ಟು ಹಾಲುಗರೆಯುತ್ತವೆ. ಆದ್ದರಿಂದ ಇಲ್ಲಿಂದ ಬೆಣ್ಣೆಯು ಬಹಳವಾಗಿ ಹೋಗುತ್ತದೆ. ಮುಂಬಯಿ, ಪೂಣೆಗೆ ಮುಖ್ಯವಾಗಿ ಖಾನದೇಶದ ಬೆಣ್ಣೆಯು ಬರುತ್ತದೆ.

## ಪ್ರಶ್ನೆಗಳು

೧. ಮಹಾರಾಷ್ಟ್ರದ ಸ್ವಾಭಾವಿಕ ವಿಭಾಗಗಳು ಯಾವವು? ಅಲ್ಲಿಯ ಹವಾಮಾನವು ಹೇಗೆ ಇರುತ್ತದೆ?

೨. ಕೆಳಗೆ ಕೊಟ್ಟವುಗಳು ಯಾತರ ಸಲುವಾಗಿ ಪ್ರಸಿದ್ಧ ಅವೆ?

ಅ) ಮಹಾಬಳೇಶ್ವರ ಬ) ಪುಣೆ ಕ) ಸೊಲ್ಲಾಪೂರ ಡ) ನಾಶೀಕ ಇ) ಕೊಲ್ಹಾಪೂರ.

೩. ಮಹಾರಾಷ್ಟ್ರದೊಳಗಿನ ಮುಖ್ಯವಾದ ಕೊಳ್ಳಗಳು ಯಾವವು? ಅವುಗಳೊಳಗಿನ ಹುಟ್ಟುವಳಿಗಳನ್ನು ಕೊಡಿರಿ.

೪. ಮಹಾರಾಷ್ಟ್ರದೊಳಗಿನ ತೋಟಗಳನ್ನು ಮಾಡುವ ಒಕ್ಕಲಿಗನ ಮತ್ತು ಮೇಲಡವಿಯ ಒಕ್ಕಲಿಗನ ಜೀವನವನ್ನು ಹೋಲಿಸಿರಿ.

೫. ಗೋದಾವರೀ ಕೊಳ್ಳದ ಹವಾಮಾನವನ್ನು ಹೇಳಿರಿ.

೬. ಸೊಲ್ಲಾಪೂರದಲ್ಲಿ ಗಿರಣಿಗಳಾಗಲಿಕ್ಕೆ ಕಾರಣವೇನು?

೭. ಖಾನದೇಶದೊಳಗಿನ ಹವಾಮಾನವನ್ನು ಹುಟ್ಟುವಳಿಗಳನ್ನು ಹೇಳಿರಿ.

೮. ಖಾನದೇಶದೊಳಗಿನ ಮುಖ್ಯವಾದ ಉದ್ಯೋಗಗಳು ಯಾವವು?

# ಕರ್ನಾಟಕ (ದೇಶ)

ಕರ್ನಾಟಕವು ಸುಮಾರು ೧ ಕೋಟಿ ಜನಸಂಖ್ಯೆಯುಳ್ಳ ವಿಶಾಲವಾದ ಭಾಗವಾಗಿರುತ್ತದೆ. ತುಂಗಭದ್ರೆಯ ಹೊಳೆಯಿಂದ ಅದರಲ್ಲಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕವೆಂಬ ಎರಡು ಭಾಗಗಳಾಗಿರುತ್ತವೆ. ನಾವು ವಾಸಿಸುವ ಮುಂಬಯಿ ಕರ್ನಾಟಕವು ಅಂದರೆ ಬೆಳಗಾವ, ಧಾರವಾಡ, ವಿಜಾಪೂರ, ಕಾರವಾರ ಜಿಲ್ಲೆಗಳು, ನಿಜಾಮ ಪ್ರಾಂತದ ರಾಯಚೂರ, ಬೀದರ, ಗುಲಬರ್ಗಾ ಜಿಲ್ಲೆಗಳೂ ಉತ್ತರ ಕರ್ನಾಟಕದಲ್ಲಿ ಬರುತ್ತವೆ. ದಕ್ಷಿಣ ಕರ್ನಾಟಕದಲ್ಲಿ ಮಂಗಳೂರು ಜಿಲ್ಲೆ, ಮೈಸೂರ ಪ್ರಾಂತ, ಕೊಡಗು, ಕೊಯಮುತ್ತೂರು, ನೀಲಗಿರಿ, ಸಾಲೆಮದ ತುಸುಭಾಗ, ಬಳ್ಳಾರಿ ಜಿಲ್ಲೆಗಳು ಬರುತ್ತವೆ. ಈ ಭಾಗದಲ್ಲಿ ೧೯೪೭ ವರುಷಕ್ಕಿಂತ ಮುಂಚೆ ಸಣ್ಣದೊಡ್ಡ ಸ್ವತಂತ್ರ ಸಂಸ್ಥಾನಗಳಿದ್ದವು. ಆದರೆ ಈಗ ಅವೆಲ್ಲವೂ ಹಿಂದೀ ಘಟಕ ರಾಜ್ಯದೊಳಗೆ ಸಮಾವೇಶವಾಗಿರುವವು.

**ಸ್ವಾಭಾವಿಕ ವಿಭಾಗಗಳು:**—ಕರ್ನಾಟಕದೊಳಗೆ ನಾಲ್ಕು ಸ್ವಾಭಾವಿಕ ವಿಭಾಗಗಳನ್ನು ಮಾಡಬಹುದು. (೧) ಸಮುದ್ರದಂಡೆಯ ಕಿರಿಯಗಲಾದ ಪಟ್ಟಿಯು. ಇದು ಸಹ್ಯಾದ್ರಿಗೂ ಅರಬೀ ಸಮುದ್ರಕ್ಕೂ ನಡುವೆ ಇರುತ್ತದೆ. ಇದಕ್ಕೆ ಕೊಂಕಣವೆಂಬ ಹೆಸರು. (೨) ಸಹ್ಯಾದ್ರಿಯ ಗುಡ್ಡಗಾಡು ಪ್ರದೇಶ ಅಥವಾ ಮಲೆನಾಡು. (೩) ಸಹ್ಯಾದ್ರಿಯ ಪೂರ್ವದ ಅಡಿಯಲ್ಲಿರುವ ಪ್ರದೇಶ, ಮಲೆನಾಡಿನ ಅಂಚು ಅಥವಾ ಸೆರಗು. (೪) ಮಲೆನಾಡಿನ ಪೂರ್ವಕ್ಕಿರುವ ಬಯಲು ಪ್ರದೇಶ ಅಥವಾ ಬೆಳೆವಲ.

**ಹವಾಮಾನ:**-ಕೊಂಕಣ ಪಟ್ಟಿಯ ಹವಾಮಾನದ ಬಗ್ಗೆ ಈ ಮೊದಲೇ ಹೇಳಿದೆ. ನೈಋತ್ಯ ಮನ್ಸೂನ ಗಾಳಿಗಳು ಸಹ್ಯಾದ್ರಿಯ ಪಶ್ಚಿಮ ಬದಿಗೆ ಬೀಸುವದರಿಂದ ಅಲ್ಲಿ ಮಳೆ ಹೆಚ್ಚಾಗುವದು. ಆದ್ದರಿಂದ ಅಲ್ಲಿ ದೊಡ್ಡ ದೊಡ್ಡ ಹಳವುಗಳು ಬೆಳೆದಿರುತ್ತವೆ. ಸಣ್ಣ ದೊಡ್ಡ ಹೊಳೆಗಳು ವೇಗದಿಂದ ಹರಿದು ಸಮುದ್ರಕ್ಕೆ ಕೂಡುತ್ತವೆ. ಇಲ್ಲಿ ಗಿಡಗಳ ಎಲೆಗಳು ಉದುರಿ ಕೊಳೆಯುವದರಿಂದ (ಮಲೆಯುವದರಿಂದ) ಹವೆಯು ಅನಾರೋಗ್ಯಕರವಾಗಿರುತ್ತದೆ. ಆದ್ದರಿಂದ ಇದಕ್ಕೆ ಮಲೆತನಾಡು ಅಥವಾ ಮಲ್ನಾಡು ಎಂದೆನ್ನು

ತ್ತಾರೆ. ಈ ದಟ್ಟಾದ ಅಡವಿಯೊಳಗೆ ಅತ್ಯುತ್ತಮವಾದ ತೇಗು, ಗಂಧ ಮುಂತಾದ ಗಿಡಗಳು ಬೆಳೆಯುತ್ತವೆ. ಇಲ್ಲಿಯ ಜನರ ಮುಖ್ಯ ಉದ್ಯೋಗವು




ಆಕೃತಿ ೫೩ ಕರ್ನಾಟಕ

ಗಿಡಗಳನ್ನು ಕಡಿಯುವದು, ಹೊಳವುಗಳಲ್ಲಿ ಕೆಲಸ ಮಾಡುವದು ಆಗಿರುತ್ತದೆ. ದಕ್ಷಿಣ ಮಲೆನಾಡಿನಲ್ಲಿ ಕಾಫೀ ತೋಟಗಳಿರುತ್ತವೆ. ಇಲ್ಲಿಯ ಹವೆಯು ಅನಾರೋಗ್ಯಕರವಾಗಿರುವದರಿಂದ ಜನರು ಅಶಕ್ತರಾಗಿರುತ್ತಾರೆ. ಒಕ್ಕಲತನವು

ತೀರ ತುಸು ನಡೆಯುತ್ತದೆ. ಜನವಸತಿಯಾದರೂ ಅಷ್ಟಕ್ಕಷ್ಟೇ ಇರುತ್ತದೆ.

ಮಲೆನಾಡಿನ ಸೆರಗಿನಲ್ಲಿ ಮಳೆಯ ಪ್ರಮಾಣವು ಕಡಿಮೆ. ೪೦ ಇಂಚಿನ ವರೆಗೆ ಬೀಳುತ್ತದೆ. ಇಲ್ಲಿಯ ಮುಖ್ಯ ಉದ್ಯೋಗವು ಒಕ್ಕಲತನವು. ಮಳೆಯು ಸಾಕಷ್ಟು ಆಗುವದರಿಂದ ಭತ್ತವು ಮುಖ್ಯವಾದ ಬೆಳೆಯು. ಭತ್ತದ ಬೆಳೆಯನ್ನು ತೆಗೆದುಕೊಂಡು ಅದರ ತೇವಿನ ಮೇಲಿಂದ ಕಾಯಿಪಲ್ಯ, ಬಟಗಡಲೆ ಮುಂತಾದ ಕಾಳುಗಳನ್ನು ಬೆಳೆಯುತ್ತಾರೆ. ನೀರಿನ ಸೌಕರ್ಯವಿದ್ದಲ್ಲಿ ಕಬ್ಬು ಬೆಳೆಯುತ್ತದೆ.

ಪೂರ್ವಕ್ಕೆ ಹೋದಂತೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ನೆಲವು ಸಮನಾಗಿರುತ್ತದೆ. ಕರೇ ಮಣ್ಣಿನ ಭೂಮಿಯು. ಅದು ಬಹಳ ಬೆಳೆಯುಳ್ಳದ್ದು. ಹತ್ತಿ, ಜೋಳ, ಸಜ್ಜೆ, ಬೇಳೆಯ ಕಾಳುಗಳು, ಎಣ್ಣೇಕಾಳುಗಳು ಮುಖ್ಯವಾದ ಬೆಳೆಗಳು. ಕೆರೆಕಾಲುವೆಗಳಿದ್ದಲ್ಲಿ, ಹೊಳೆಗಳ ಕೊಳ್ಳಗಳಲ್ಲಿ ಕಬ್ಬು, ಭತ್ತಗಳನ್ನಾದರೂ ಬೆಳೆಯುತ್ತಾರೆ. ಇಲ್ಲಿ ಮುಂಗಾರಿ, ಹಿಂಗಾರಿ, ಎರಡೂ ಬೆಳೆಗಳನ್ನು ಬೆಳೆಯುತ್ತಾರೆ. ಗೋದಿ, ಕಡಲೆ, ಹಿಂಗಾರಿಯ ಬೆಳೆಗಳು. ಭೂಮಿಯು ಫಲವತ್ತಾಗಿರುವದರಿಂದ ಮಳೆಯು ಚೆನ್ನಾಗಿ ಆಯಿತೆಂದರೆ ಒಕ್ಕಲಿಗನು ಹಗೆಗಳನ್ನು ಕಾಳಿನಿಂದ ತುಂಬುತ್ತಾನೆ. ದನಕರುಗಳಿಗೆ ಸಾಕಷ್ಟು ಕಣಿಕೆ ಹೊಟ್ಟುಗಳು ಸಿಗುವದರಿಂದ ಅವು ಪುಷ್ಟವಾಗಿರುತ್ತವೆ. ಒಟ್ಟಿನ ಮೇಲೆ ಒಕ್ಕಲಿಗನು ಸುಖಿಯಾಗಿರುತ್ತಾನೆ. ಬೆಳವಲನಾಡಿನಲ್ಲಿಯ ಮನೆಗಳು ಮೇಲುಮುದ್ದಿಯವು; ಮಳೆ ಕಡಿಮೆ. ಬಿಸಿಲು ಹೆಚ್ಚಾಗಿರುವದರಿಂದ ಈ ಮನೆಗಳು ತಂಪಾಗಿರುತ್ತವೆ. ಕರ್ನಾಟಕದ ಪೂರ್ವದ ಅಂಚಿನಲ್ಲಿ ಮಳೆಯ ಅನಿಶ್ಚಿತೆಯು ಬಹಳ. ಭೂಮಿಯು ಫಲವತ್ತಾಗಿದ್ದರೂ ನೀರಿನ ಕೊರತೆಯಿಂದ ಒಕ್ಕಲಿಗನು ಬಳಲುತ್ತಿರುತ್ತಾನೆ. ಕೆರೆ ಕಾಲುವೆಗಳು ಹೆಚ್ಚಾದರೆ ಈ ಭಾಗವು ಎಲ್ಲ ರೀತಿಯಿಂದಲೂ ಸಮೃದ್ಧಿಯಾಗುವದು.

ಇಡೀ ಕರ್ನಾಟಕವೆಲ್ಲ ತಪ್ಪಲು ಪ್ರದೇಶವಾಗಿದ್ದರೂ ಈ ತಪ್ಪಲವು ದಕ್ಷಿಣಕ್ಕೆ ಹೋದಹಾಗೆ ಎತ್ತರಾಗುತ್ತ ಹೋಗುತ್ತದೆ. ಮೈಸೂರು ಪ್ರಾಂತವು ಈ ತಪ್ಪಲಿನ ಅತ್ಯುನ್ನತವಾದ ಭಾಗವು. ಆದ್ದರಿಂದ ಅಲ್ಲಿಯ ಹವೆಯು ಸಮವಾಗಿರುತ್ತದೆ. ಅದರ ದಕ್ಷಿಣಕ್ಕೆ **ದೊಡ್ಡ ಬೆಟ್ಟ**ವೆಂಬ ಗುಡ್ಡವಿದ್ದು ಎಡಬಲಕ್ಕೆ ಪೂರ್ವಪಶ್ಚಿಮ ಘಟ್ಟಗಳ ಸಾಲುಗಳಿರುತ್ತವೆ. ಮೈಸೂರ ಪ್ರಾಂತವು ಎತ್ತರವಾಗಿರುವದರಿಂದ ಅಲ್ಲಿ ಎಷ್ಟೋ ಹೊಳೆಗಳು ಹುಟ್ಟಿ ಹರಿ

ದಿರುತ್ತವೆ. ಕಾವೇರಿ ನದಿಯು ಪಶ್ಚಿಮ ಘಟ್ಟದಲ್ಲಿ ಉಗಮಹೊಂದಿ ಮೈಸೂರ ಪ್ರಾಂತದಲ್ಲಿ ಹರಿದು ಪೂರ್ವ ಘಟ್ಟವನ್ನು ದಾಟಿ ಬಂಗಾಲದ ಉಪ ಸಾಗರಕ್ಕೆ ಕೂಡುತ್ತದೆ. ಪೂರ್ವ ಘಟ್ಟದಿಂದ ಇಳಿಯುವಾಗ ಅದರ ಮೇಲೆ ಅಲ್ಲಲ್ಲಿ ತಡಸಲುಗಳುಂಟಾಗಿರುತ್ತವೆ. ಈ ತಡಸಲಿನಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ ಮೈಸೂರ ಪ್ರಾಂತ ದೊಳಗೆಲ್ಲ ಅದರ ಉಪಯೋಗ ವನ್ನು ಮಾಡಿಕೊಂಡಿದ್ದಾರೆ. ಅದ ರಂತೆ ತುಂಗಾ ಮತ್ತು ಭದ್ರಾ ಎಂಬ ಹೊಳೆಗಳಾದರೂ ಪಶ್ಚಿಮ ಘಟ್ಟದಲ್ಲಿ ಉಗಮವಾಗಿ ಮುಂದೆ ಕೂಡಿಕೊಂಡು ತುಂಗ ಭದ್ರಾ ಎಂಬ ಹೆಸರಿನಿಂದ ಹರಿದು ಕೃಷ್ಣಾನದಿಗೆ ಕೂಡು ತ್ತದೆ. ಕಾವೇರಿ, ತುಂಗಭದ್ರಾ ಹೊಳೆಗಳಿಗೆ ಅಣೆಕಟ್ಟುಗಳನ್ನು ಕಟ್ಟಿ ನೀರಿನ ಸೌಕರ್ಯವನ್ನು ಮಾಡಿರುವರಲ್ಲದೆ, ವಿದ್ಯುಚ್ಛಕ್ತಿ ಯು ಇಡೀ ಮೈಸೂರು ಪ್ರಾಂತ ಕ್ಕೆಲ್ಲ ಪೂರೈಸಲ್ಪಟ್ಟಿದೆ. ಆದ್ದರಿಂದ ಮೈಸೂರು ಪ್ರಾಂತವು ಇಡೀ ಹಿಂದುಸ್ಥಾನದಲ್ಲೆಲ್ಲ ಹೆಚ್ಚು ಊರ್ಜಿತಾವಸ್ಥೆಯಲ್ಲಿರುತ್ತದೆ.



ಆಕೃತಿ ೫೪ ತಡಸಲು

ಇಲ್ಲಿಯ ಪಶ್ಚಿಮದ ಹಳ್ಳಿಗಳಲ್ಲಿ ಒಕ್ಕಲತನವೂ, ಗಿಡಗಳನ್ನು ಕಡಿಯುವ ಉದ್ಯೋಗವೂ ಸಾಗುತ್ತವೆ. ಯಾಕಂದರೆ ಇದು ಮಲೆನಾಡು. ಜನರು ರಾಗಿಯ ಮುದ್ದಿ, ಅಕ್ಕಿಯ ಅನ್ನವನ್ನು ಉಣ್ಣುವರು. ಕಲ್ಲು ಮಣ್ಣುಗಳಿಂದ ಕಟ್ಟಿದ ಮನೆಗಳಲ್ಲಿ ವಾಸಿಸುವರು. ತುಂಗಭದ್ರೆ ಕಾವೇರಿಗಳ ಬೈಲಿನಲ್ಲಿ ಭತ್ತ, ಕಬ್ಬು ಮುಖ್ಯವಾಗಿ ಬೆಳೆಯುತ್ತವೆ. ಹಣ್ಣುಹಂಪಲಗಳ ತೋಟ ಗಳಾದರೂ ಅಲ್ಲಲ್ಲಿ ಕಾಣುವವು. ಇಲ್ಲಿ ಸಕ್ಕರೆಯ ಕಾರಖಾನೆಗಳಾದರೂ

ಇತ್ತಲಾಗಿ ಹೊರಟಿವೆ. ಕಾವೇರಿ ಹೊಳೆಯ ನೀರಿನಿಂದ ಶಿವಸಮುದ್ರ ವಲ್ಲಿಯೂ, ಶರಾವತಿಯ ನೀರಿನಿಂದ ಗೆರಸಪ್ಪೆಯಲ್ಲಿಯೂ ವಿದ್ಯುತ್ತನ್ನು ಹುಟ್ಟಿಸಿದ್ದಾರೆ. ಇಲ್ಲಿ ಸುಂದರವಾದ ದೇವಾಲಯಗಳೂ ಮೂರ್ತಿಗಳೂ ಬಹಳ ವಿರುತ್ತವೆ. ಶ್ರವಣಬೆಳಗೊಳದಲ್ಲಿಯ ಗೋಮಟೇಶ್ವರವೆಂಬ ಮೂರ್ತಿಯು ಸುಮಾರು ೬೦ ಅಡಿ ಎತ್ತರವಿರುತ್ತದೆ.

ದಕ್ಷಿಣಕ್ಕೆ ಹೋದಹಾಗೆ ರೇಶಿಮೆ ಹುಳಗಳನ್ನು ಸಾಕಿ ಅವುಗಳಿಂದ ರೇಶಿಮೆಯನ್ನು ತಯಾರಿಸುವ ಉದ್ಯೋಗವು ಹೆಚ್ಚಾಗಿ ನಡೆಯುತ್ತದೆ. ಎಷ್ಟೋ ಜನರು ಈ ಉದ್ಯೋಗದಿಂದಲೇ ಹೊಟ್ಟೆತುಂಬಿಕೊಳ್ಳುತ್ತಾರೆ. ಈ ಪ್ರಕಾರವಾಗಿ ತುಂಗಭದ್ರೆಯಿಂದ ನೀಲಗಿರಿಯ ವರೆಗೆ ಒಕ್ಕಲತನ, ತೋಟಪಟ್ಟಿಗಳನ್ನು ಮಾಡುವದು ಮುಂತಾದ ಉದ್ಯೋಗ ವ್ಯವಸಾಯಗಳು ಚನ್ನಾಗಿ ಸಾಗುತ್ತವೆ. ಒಟ್ಟಿನ ಮೇಲೆ ಈ ಭಾಗದೊಳಗಿನ ಜನರು ಸುಖಿಗಳಾಗಿರುತ್ತಾರೆಂದು ಹೇಳಬಹುದು.

**ಮೈಸೂರು** ಅತಿ ಸುಂದರವಾದ ಪಟ್ಟಣವು. ಇಲ್ಲಿ ಅಂದವಾದ ಅರಮನೆಗಳೂ, ಚಂದವಾದ ಸಾರ್ವಜನಿಕ ತೋಟಗಳೂ, ಶಾಲೆ ಕಾಲೇಜುಗಳೂ ಇರುತ್ತವೆ. ಇದಕ್ಕೆ ಹಿಂದುಸ್ಥಾನದ ಉಪವನಗಳ ನಗರ (ಗಾರ್ಡನ ಸಿಟೀ) ಎಂದೆನ್ನುತ್ತಾರೆ. ಕಾವೇರಿಗೆ ಕಟ್ಟಿದ ಕನ್ನಂಬಾಡಿಯ ಅಣೆಕಟ್ಟೂ, ವೃಂದಾವನವೆಂಬ ತೋಟವೂ, ಪ್ರೇಕ್ಷಣೀಯವಾಗಿರುತ್ತವೆ. ಮೈಸೂರು ಅತಿ ಸುಂದರವಾದ ಪಟ್ಟಣವಾಗಿದ್ದರೆ, **ಬೆಂಗಳೂರು** ಜನವಸತಿಯಿಂದಲೂ, ಉದ್ಯೋಗ ವ್ಯವಸಾಯಗಳಿಂದಲೂ ಹೆಚ್ಚು ದೊಡ್ಡದಾಗಿರುತ್ತದೆ. ಅಲ್ಲಿ ಡಂಡಿನ ಠಾಣ್ಯವಿದ್ದು ವಿಮಾನಮಾಡುವ ಕಾರಖಾನೆಯು ಇರುತ್ತದೆ. **ಶ್ರೀರಂಗಪಟ್ಟಣವು** ಇತಿಹಾಸ ಪ್ರಸಿದ್ಧವಾದದ್ದು. ಇಲ್ಲಿ ಟೀಪೂಸುಲ್ತಾನನ ಗೋರಿಯುಂಟು. ಕೋಲಾರದ ಹತ್ತರ ಬಂಗಾರದ ಕಣಿಗಳುಂಟು. **ಭದ್ರಾವತಿಯಲ್ಲಿ** ಕಾಗದ, ಕಬ್ಬಿಣ, ಉಕ್ಕುಗಳ ಕಾರಖಾನೆಗಳಿರುವವು.

## ಪ್ರಶ್ನೆಗಳು

೧. ಕರ್ನಾಟಕದ ಸ್ವಾಭಾವಿಕ ವಿಭಾಗಗಳು ಯಾವುವು? ಅವುಗಳ ಹವಾಮಾನವನ್ನು ವರ್ಣಿಸಿರಿ.

೨. ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕದಲ್ಲಿ ಒಳಪಟ್ಟ ಪ್ರದೇಶಗಳು ಯಾವವು?

೩. ಮೈಸೂರು ಪ್ರಾಂತದ ಹವಾಮಾನವನ್ನು ವರ್ಣಿಸಿ ಅಲ್ಲಿಯ ಮುಖ್ಯ ಹೊಳೆಗಳು ಯಾವವು ಎಂಬುದನ್ನು ಹೇಳಿರಿ.
೪. ಬೆಳವಲ ನಾಡಿನ ಒಕ್ಕಲಿಗನ ಜೀವನವನ್ನು ವರ್ಣಿಸಿರಿ. ಅಲ್ಲಿಯ ಹುಟ್ಟುವಳಿಗಳು ಯಾವವು?
೫. ಕೆಳಗಿನವುಗಳು ಯಾತರ ಸಲುವಾಗಿ ಪ್ರಸಿದ್ಧ ಅವೆ?
ಅ) ಕೋಲಾರ ಬ) ಶ್ರೀರಂಗ ಪಟ್ಟಣ ಕ) ಬೆಂಗಳೂರು ಡ) ಭದ್ರಾವತಿ.
೬. ಮಲೆನಾಡಿಗೆ ಈ ಹೆಸರು ಹೇಗೆ ಬಂದಿದೆ? ಅಲ್ಲಿಯ ಜನರ ಜೀವನವನ್ನು ವರ್ಣಿಸಿರಿ.

ಪಾಠ ೨೧

# ಮುಂಬಯಿ ಕರ್ನಾಟಕ

ಕೃಷ್ಣಾನದಿಯು ಮಹಾರಾಷ್ಟ್ರದೊಳಗಿಂದ ಹೊರಬಿದ್ದು ಪೂರ್ವವಾಹಿನಿಯಾಗಿ ಬೆಳಗಾವಿಯ ಗಡಿಯಲ್ಲಿ ಸೇರಲು, ಅಲ್ಲಿಂದ ಮುಂಬಯಿ ಪ್ರಾಂತದ ಗಡಿಯ ವರೆಗೆ ಅದು ಮುಂಬಯಿ ಕರ್ನಾಟಕದೊಳಗಿಂದ ಅಂದರೆ ನಾವಿರುವ ಪ್ರದೇಶದೊಳಗಿಂದ ಹರಿಯುತ್ತದೆ. ಬೆಳಗಾವಿ, ಧಾರವಾಡ, ವಿಜಾಪೂರ ಜಿಲ್ಲೆಗಳು ಕೃಷ್ಣಾನದಿಯ ಕೊಳ್ಳದೊಳಗೆ ಬರುತ್ತವೆ. ಈ ಭಾಗದಲ್ಲಿ ಅದಕ್ಕೆ ಬಲಗಡೆಯಿಂದ ಘಟಪ್ರಭಾ, ಮಲಪ್ರಭಾ, ಹೊಳೆಗಳು ಬಂದು ಕೂಡುತ್ತವೆ. ಸಹ್ಯಾದ್ರಿಯಿಂದ ಕರ್ನಾಟಕದೊಳಗೆ ಕೊಂಕಣ ಪಟ್ಟಿ ಮತ್ತು ದೇಶವೆಂಬ ಎರಡು ಭಾಗಗಳಾಗಿರುತ್ತವೆ. ಮುಂಬಯಿ ಕರ್ನಾಟಕದ ಕೊಂಕಣ ಪಟ್ಟಿಯಲ್ಲಿ ಮುಖ್ಯವಾಗಿ ಕಾರವಾರ ಜಿಲ್ಲೆಯು ಬರುತ್ತದೆ. ಉಳಿದ ಮೂರು ಜಿಲ್ಲೆಗಳೂ ಹಲವು ಚಿಕ್ಕಪುಟ್ಟ ಸಂಸ್ಥಾನಗಳೂ ದೇಶದೊಳಗೆ ಬರುತ್ತವೆ. ಈಗ ಈ ಸಂಸ್ಥಾನಗಳೆಲ್ಲ ಹತ್ತರಿದ್ದ ಜಿಲ್ಲೆಗಳಲ್ಲಿ ವಿಲೀನವಾಗಿ ಹೋಗಿರುವದರಿಂದ ಅವು ಆಯಾ ಜಿಲ್ಲೆಗಳ ಭಾಗಗಳೇ ಆಗಿರುತ್ತವೆ.

ಮುಂಬಯಿ ಕರ್ನಾಟಕದೊಳಗೆ ನಾಲ್ಕು ಸ್ವಾಭಾವಿಕ ವಿಭಾಗಗಳಾಗಿರುತ್ತವೆ. ೧) ಕೊಂಕಣ, ಸಹ್ಯಾದ್ರಿಗೂ ಅರಬೀ ಸಮುದ್ರಕ್ಕೂ ನಡುವಿರುವ ಕಿರಿಯಗಲಾದ ಪಟ್ಟಿಯು. ೨) ಸಹ್ಯಾದ್ರಿಯ ಗುಡ್ಡಗಾಡು ಪ್ರದೇಶ ಅಥವಾ ಮಲೆನಾಡು. ೩) ಸಹ್ಯಾದ್ರಿಯ ಅಡಿಯಿಂದ ಪೂರ್ವಕ್ಕೆ ಸುಮಾರು




ಆಕೃತಿ ೫೫ ಮುಂಬಯಿ ಕರ್ನಾಟಕದ ಸ್ವಾಭಾವಿಕ ವಿಭಾಗಗಳು

೫೦ ಮೈಲಿನ ಅಗಲವಾದ ಪಟ್ಟಿ. ಇದಕ್ಕೆ ಮಲೆನಾಡಿನ ಅಂಚು ಅಥವಾ ಸೆರಗು ಎಂದೆನ್ನಬಹುದು. ೪) ಬಯಲು ಪ್ರದೇಶ ಅಥವಾ ಬೆಳವಲು. ಈ ಭಾಗಗಳಲ್ಲಿಯ ಮಳೆಯ ಪ್ರಮಾಣವು ಬೇರೆ ಬೇರೆಯಾಗಿರುವದರಿಂದ ಅಲ್ಲಿಯ ಹುಟ್ಟುವಳಿಗಳೂ, ಜನಜೀವನವೂ ಭಿನ್ನವಾಗಿರುವದು ಸ್ವಾಭಾವಿಕ ವಾಗಿರುತ್ತದೆ.

ಕೊಂಕಣ ಪಟ್ಟಿಯಲ್ಲಿ ಮುಖ್ಯವಾಗಿ ಕಾರವಾರ ಜಿಲ್ಲೆಯ ಸಮಾವೇಶ ವಾಗುತ್ತದೆ. ಇದು ಸಮುದ್ರ ತೀರದ ತಗ್ಗು ಭೂಮಿಯು. ಇದರ ಉದ್ದಳತೆಯು ದಕ್ಷಿಣೋತ್ತರ ಸುಮಾರು ೭೫ ಮೈಲು ಇದ್ದು, ೧೫ ಮೈಲು ಅಗಲಾಗಿರುತ್ತದೆ. ಇದು ಸಮುದ್ರ ಸಪಾಟಿಯ ಮೇಲಿರುವದರಿಂದ, ನೈಋತ್ಯ ಮನ್ಸೂನ ಗಾಳಿ ಗಳಿಂದ ಜೂನ ತಿಂಗಳಿಂದ ಅಕ್ಟೋಬರದ ವರೆಗೆ ಮಳೆಯು ಒಂದೇ ಸವನೇ ಬೀಳುತ್ತಿರುತ್ತದೆ. ಸರಾಸರಿ ಮಳೆಯು ೧೦೦ ರಿಂದ ೧೩೦ ಇಂಚಿನ ವರೆಗೆ ಇರುತ್ತದೆ. ಸಮುದ್ರದ ಸಮೀಪಕ್ಕಿರುವದರಿಂದ ಇಲ್ಲಿಯ ಹವೆಯು ಸಮವಾಗಿ ರುತ್ತದೆ. ಸಾಧಾರಣ ಆರೋಗ್ಯಕರವಾದದ್ದೂ ಇರುತ್ತದೆ. ಹೊಳೆಹಳ್ಳಗಳ ಮುಖಗಳಿಂದಲೂ, ಸಣ್ಣ ಸಣ್ಣ ಆಖಾತ ಭೂಶಿರಗಳಿಂದಲೂ, ಚಿಕ್ಕ ಪುಟ್ಟ ನಡು ಗಡ್ಡೆಗಳಿಂದಲೂ ಸಮುದ್ರದಂಡೆಯು ಒಡಕು ಒಡಕಾಗಿ ಕಾಣುತ್ತದೆ. ಹಲವು ಕಡೆಯಲ್ಲಿ ಸಹ್ಯಾದ್ರಿಯ ಸಾಲುಗಳು ತೀರ ಸಮುದ್ರದ ವರೆಗೆ ಮುಟ್ಟಿರುವವು. ಸಮುದ್ರ ದಂಡೆಗೆ ಉಸುಕಿನ ನೆಲವು ಇದ್ದು ಗುಡ್ಡದ ಕಡೆಗೆ ಹೋದಹಾಗೆ ಕೆಂಪು ಮಣ್ಣು (ಮಸಾರಿ) ಮತ್ತು ಗರಸಿನ ಭೂಮಿ ಇರುತ್ತದೆ. ಇಲ್ಲಿ ಎಷ್ಟೋ ಹೊಳೆ ಗಳುಂಟು. ಆದರೆ ಅವು ಗುಡ್ಡಗಳಿಂದ ಹರಿದುಬರುವದರಿಂದ ಸೆಳವು ಬಹಳ. ಒಕ್ಕಲತನಕ್ಕೆ ಅವು ಉಪಯೋಗವಾಗುವದಿಲ್ಲ. ಕಾಳೀ, ಅಘನಾಶಿನೀ, ಶರಾವತೀ ಎಂಬ ಹೊಳೆಗಳು ಮುಖ್ಯವಾದವುಗಳು. ಶರಾವತಿಯಿಂದಾದ ಗೆರ ಸಪ್ಪೆಯ ಧಬಧಬೆಯು ಪ್ರಸಿದ್ಧವಾಗಿರುತ್ತದೆ. ಅದಕ್ಕೆ ಜೋಗದ ತಡಸಲ ವೆಂತಲೂ ಅನ್ನುತ್ತಾರೆ. (ಆ. ೫೪).

ಸಮುದ್ರಧ ದಂಡೆಗುಂಟ ಉಸುಕಿನ ಭೂಮಿಯಲ್ಲಿ ತೆಂಗು ಬೆಳೆಯು ವದು. ಮಳೆ ಬಹಳವಾಗುವದರಿಂದ ಭತ್ತ, ಕಬ್ಬುಗಳಾದರೂ ಬೆಳೆಯುವವು. ಪೂರ್ವದ ಕಡೆಗೆ ಹೋದ ಹಾಗೆ ಅಡಿಕೆ, ಬಾಳೆ, ಯಾಲಕ್ಕಿ, ಮೆಣಸು, ತೆಂಗು ಮುಂತಾದವು ಬೆಳೆಯುತ್ತವೆ. ಇಲ್ಲಿಯ ಒಕ್ಕಲಿಗರು ಸಾಧಾರಣವಾಗಿ ತಮ್ಮ ಮನೆಯನ್ನು ತೋಟದೊಳಗೇ ಕಟ್ಟಿಕೊಂಡಿರುತ್ತಾರೆ. ಸುತ್ತಲೂ

ಅಡಿಕೆ, ತೆಂಗು, ಬಾಳೆ ಮುಂತಾದುವುಗಳ ತೋಟಗಳಿರುತ್ತವೆ. ಮನೆಗಳನ್ನು ಇಳಿಜಾರಾದ ಚಪ್ಪರಗಳಿಂದಲೂ, ಮಣ್ಣು ಕಲ್ಲುಗಳಿಂದಲೂ ಕಟ್ಟುತ್ತಾರೆ. ಯಾಕಂದರೆ ಮಳೆ ಬಹಳ. ಸಿರಸೀ, ಸಿದ್ದಾಪೂರ ತಾಲೂಕುಗಳಲ್ಲಿ ಅಡಿಕೆ, ಮೆಣಸು, ಯಾಲಕ್ಕಿಗಳು ಚೆನ್ನಾಗಿ ಬೆಳೆಯುತ್ತವೆ. ಅಲ್ಲಿಯ ಉಷ್ಣವಾದ ಮತ್ತು ಆರ್ದ್ರವಾದ ಹವೆಯು ಈ ಬೆಳೆಗಳಿಗೆ ಪೋಷಕವಾಗಿರುತ್ತದೆ. ಅಡಿಕೆ ಮತ್ತು ಬಾಳೆ ಗಿಡಗಳನ್ನು ಒಂದೇ ಕಡೆಗೆ ಹಚ್ಚುತ್ತಾರೆ. ಅಡಿಕೆಯ ಗಿಡದ ಮೇಲೆ ಮೆಣಸಿನ ಬಳ್ಳಿಗಳನ್ನು ಹಬ್ಬಿಸುತ್ತಾರೆ. ಅಲ್ಲಲ್ಲಿ ಯಾಲಕ್ಕಿಯ ಗಿಡಗಳನ್ನು ಹಚ್ಚುತ್ತಾರೆ. ಗಿಡಗಳನ್ನು ಹಚ್ಚಿದ ಹನ್ನೆರಡು ವರುಷಗಳ ಮೇಲೆ ಅದರಿಂದ ಬೆಳೆ ಬರಲಾರಂಭಿಸುತ್ತದೆ. ಮುಂದೆ ಮಾತ್ರ ಅದರಿಂದ ಸಾಕಷ್ಟು ಹುಟ್ಟುವಳಿಯು ಬರುತ್ತದೆ. ಸಿರಸಿಯ ಚಿಕಣೀ ಅಡಿಕೆಗಳು ಪ್ರಸಿದ್ಧವಾಗಿರುತ್ತವೆ. ಇಲ್ಲಿಯ ತೋಟಗಳು ಇಡೀ ಮುಂಬಯಿ ಇಲಾಖೆಯಲ್ಲಿ ಪ್ರಸಿದ್ಧವಾಗಿರುತ್ತವೆ. ಗುಡ್ಡಗಳ ಬದಿಯಲ್ಲಿ ದಟ್ಟಾದ ಅಡವಿಗಳಿವೆ. ಅಲ್ಲಿ ತೇಗು, ಶ್ರೀಗಂಧ, ಮತ್ತಿ ಮುಂತಾದ ಮರಗಳು ಬೆಳೆಯುತ್ತವೆ.

ಒಕ್ಕಲತನವನ್ನು ಬಿಟ್ಟರೆ ಇಲ್ಲಿಯ ಮುಖ್ಯ ಉದ್ಯೋಗವೆಂದರೆ ಮೀನ ಹಿಡಿಯುವದು. ಸಮುದ್ರದ ದಂಡೆಗುಂಟ ಇರುವ ಸಣ್ಣ ಸಣ್ಣ ಹಳ್ಳಿಗಳಲ್ಲಿ ಎಷ್ಟೋ ಜಾಲಗಾರರು ಮೀನ ಹಿಡಿದು ಹೊಟ್ಟೆತುಂಬಿಕೊಳ್ಳುವರು. ಇಲ್ಲಿ ಗಂಧದ ಕಟ್ಟಿಗೆಯಿಂದ ಮಾಡಿದ ಕೆತ್ತಿದಸರಕುಗಳೂ, ಬೆತ್ತದ ಸಾಮಾನುಗಳೂ ಚನ್ನಾಗಿ ಆಗುತ್ತವೆ.

**ಕಾರವಾರ**ದ ಬಂದರವು ತಕ್ಕಮಟ್ಟಿಗೆ ಪ್ರಸಿದ್ಧವಾಗಿರುತ್ತದೆ. **ಭಟಕಳ, ತದಡಿ, ಹೊನ್ನಾವರ** ಇವು ಬೇರೆ ಬಂದರದ ಸ್ಥಳಗಳಾಗಿರುತ್ತವೆ. **ಸಾಣೀಕಟ್ಟೆ**ಯಲ್ಲಿ ಉಪ್ಪಿನ ಆಗರಗಳುಂಟು. ಭಟಕಳದ ಬಂದರವು ಚನ್ನಾಗಿದ್ದು ಅದನ್ನು ಬೆಳೆಸುವ ವಿಚಾರವಿದೆ. **ಗೋಕರ್ಣ**ವು ಪ್ರಸಿದ್ಧವಾದ ದೇವಸ್ಥಾನವು. ಅದು ಸಮುದ್ರದಂಡೆಯ ಮೇಲಿರುತ್ತದೆ. ಇಲ್ಲಿಯ ಮಹಾಬಲೇಶ್ವರ ಲಿಂಗವನ್ನು ರಾವಣನು ಸ್ಥಾಪಿಸಿದನೆಂದು ಹೇಳುತ್ತಾರೆ.

ಕೊಂಕಣಪಟ್ಟೆಯು ಕರ್ನಾಟಕದ ಉಳಿದ ಭಾಗಕ್ಕೆ ಲೈನಮಾರ್ಗಗಳಿಂದ ಜೋಡಿಸಲ್ಪಟ್ಟಿದೆ. ರೇಲು ಮಾರ್ಗಗಳು ಇರುವದಿಲ್ಲ. ಹುಬ್ಬಳ್ಳಿಯಿಂಧಲೂ, ಬೆಳಗಾವಿಯಿಂದಲೂ ಲೈನದಾರಿಗಳುಂಟು. ಕಾರವಾರವನ್ನು ಹುಬ್ಬಳ್ಳಿಗಾಗಲಿ, ಅಳಣಾವರಕ್ಕಾಗಲಿ ರೇಲಿನಿಂದ ಜೋಡಿಸುವ ಯೋಜನೆಯುಂಟು.

ಕೊಂಕಣ ಪಟ್ಟಿಯಲ್ಲಿ ಮಳೆ ಬಹಳವಾದರೂ ಭೂಮಿಯು ತೀರ ತುಸು ಇರುತ್ತದೆ. ಆದ್ದರಿಂದ ಮೇವು-ಮಿಡಚಿಗಳ ಕೊರತೆಯು ಬಹಳ. ಒಕ್ಕಲ ತನವನ್ನು ಮನುಷ್ಯರೇ ಮಾಡುತ್ತಾರೆ. ದನಕರುಗಳು ತೀರ ಕಡಿಮೆ. ಆದ್ದರಿಂದ ಇಲ್ಲಿ ಹಾಲು ಹೈನುಗಳು ಸಿಗುವದಿಲ್ಲ. ತಾಜಾ ತೆಗೆದ ಕೊಬ್ಬರಿ ಎಣ್ಣೆಯನ್ನೇ ತಿನ್ನಲಿಕ್ಕೆ ಉಪಯೋಗಿಸುತ್ತಾರೆ. ಇಲ್ಲಿಂದ ಕೊಬ್ಬರಿ ಎಣ್ಣೆ, ಕಟ್ಟಿಗೆ, ಮಸಾಲೆಯ ಸಾಮಾನು, ಅಡಿಕೆ, ಚಾಪೆ ಮುಂತಾದವುಗಳು ಕರ್ನಾಟಕದ ಉಳಿದ ಭಾಗಕ್ಕೆ ಹೋಗುತ್ತವೆ. ಮತ್ತು ಅಲ್ಲಿಂದ ಗೋದಿ, ಕಡಲೆ, ಔಡಲ, ಕುಸುಬಿ ಎಣ್ಣೆ, ತುಪ್ಪ, ಹಿಂಡಿ, ಹತ್ತೀಕಾಳು, ಅರಿವೆ, ಕಂಬಳಿ, ನೂಲು, ಎಮ್ಮೆ, ಕೋಣ, ಮುಂತಾದವುಗಳು ಕೊಂಕಣಕ್ಕೆ ಹೋಗುತ್ತವೆ.

## ಪ್ರಶ್ನೆಗಳು

೧. ಮುಂಬಯಿ ಕರ್ನಾಟಕದೊಳಗಿನ ಸ್ವಾಭಾವಿಕ ವಿಭಾಗಗಳನ್ನು ಹೇಳಿರಿ.

೨. ಕೊಂಕಣಪಟ್ಟಿಯ ಹವಾಮಾನವನ್ನು ವರ್ಣಿಸಿರಿ.

೩. ಕೊಂಕಣದೊಳಗಿನ ಮುಖ್ಯ ಉದ್ಯೋಗಗಳು ಯಾವವು? ಅಲ್ಲಿಯ ಹುಟ್ಟುವಳಿಗಳು ಯಾವವು?

೪. ಕೊಂಕಣದೊಳಗೆ ಹೈನು ಕಡಿಮೆ. ಯಾಕೆ?

೫. ಕೆಳಗಿನವು ಯಾತರ ಸಲುವಾಗಿ ಪ್ರಸಿದ್ಧ ಅವೆ?
ಅ) ಗೋಕರ್ಣ ಬ) ಗೆರಸಪ್ಪೆ ಕ) ಸಿರಸಿ ಡ) ಭಟಕಳ

೬. ಕೊಂಕಣಪಟ್ಟಿಯ ಆಮದು ರಫ್ತುಗಳು ಯಾವವು?

ಪಾಠ ೨೨

## ಮುಂಬಯಿ ಕರ್ನಾಟಕ (ಮುಂದೆ ಸಾಗಿದ್ದು)

## ಮಲೆನಾಡು

ಸಹ್ಯಾದ್ರಿಯ ಗುಡ್ಡಗಾಡು ಪ್ರದೇಶವು ಕೊಂಕಣ ಪಟ್ಟಿಗೂ ಮಲ್ಲಾಡ ಸೆರಗಿಗೂ ನಡುವಿರುವ ಎತ್ತರವಾದ ಪರ್ವತಮಯವಾದ ಪ್ರದೇಶವು. ಇದಕ್ಕೆ ಪಶ್ಚಿಮ ಘಟ್ಟವೆಂತಲೂ ಅನ್ನುವದುಂಟು. ಇದರ ಸರಾಸರೀ ಎತ್ತರವು ೨೦೦೦ ಫೂಟು. ಕೆಲವು ಶಿಖರಗಳು ೩೦೦೦ ಫೂಟುಗಳಿಗಿಂತ ಹೆಚ್ಚು ಎತ್ತರವಾಗಿರುತ್ತವೆ. ನೈಋತ್ಯಮನ್ಸೂನ ಗಾಳಿಗಳು ತಮ್ಮ ಸಂಗಡ ತಂದ ಮೋಡಗಳಿಂದ

ಈ ಭಾಗದ ಮೇಲೆ ಮಳೆ ಸುರಿಸುವವು. ಜೂನ ತಿಂಗಳಿನಿಂದ ಸಪ್ಟೆಂಬರದ ಕೊನೆಯ ವರೆಗೆ ಒಂದೇಸವನೇ ಮಳೆಯಾಗುತ್ತಿರುತ್ತದೆ. ಈ ನಾಲ್ಕೇ ತಿಂಗಳಿನಲ್ಲಿ ೨೦೦ ಇಂಚಿಗಿಂತ ಹೆಚ್ಚು ಮಳೆಯಾಗುತ್ತದೆ. ಹೆಚ್ಚು ಮಳೆ ಮತ್ತು ಉಷ್ಣ ಹವೆಯ ಮೂಲಕ ಈ ಭಾಗವೆಲ್ಲ ದಟ್ಟಾದ ಅಡವಿಗಳಿಂದ ತುಂಬಿಕೊಂಡಿರುತ್ತದೆ. ಬೆಳಗಾವಿಯಿಂದ ಕಾರವಾರಕ್ಕೆ, ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗುವ ಈ ಅಡವಿಗಳೊಳಗಿಂದಲೇ ದಾರಿಗಳನ್ನು ಮಾಡಿರುತ್ತಾರೆ. ಇಲ್ಲಿಯ ಗುಡ್ಡಗಾಡು ಭೂಮಿಯಲ್ಲಿ ಒಕ್ಕಲತನವು ಸಾಗುವದಿಲ್ಲ. ಹವೆಯು ಅನಾರೋಗ್ಯವಾದದ್ದು. ಜನರು ಮುಖ್ಯವಾಗಿ ಗಿಡಗಳನ್ನು ಕಡಿದು, ಇದ್ದಲಿಯನ್ನು ಮಾಡಿ ಹೊಟ್ಟೆತುಂಬಿಕೊಳ್ಳುತ್ತಾರೆ. ಈ ಅಡವಿಯಲ್ಲಿ ಮುಖ್ಯವಾಗಿ ಮತ್ತಿ, ತೇಗು, ಬಿದಿರು, ಶ್ರೀಗಂಧ, ಶಿಸುವು, ಹೊನ್ನಿ ಮುಂತಾದ ಗಿಡಗಳು ದಟ್ಟಾಗಿ ಬೆಳೆಯುತ್ತವೆ. ಇಲ್ಲಿಯ ಜನರು ಹಿಂದುಳಿದವರು. ಅವರು ಬಿದಿರು, ಕಟ್ಟಿಗೆಗಳಿಂದ ಗುಡ್ಡದೊಳಗೆ ಸಣ್ಣ ಸಣ್ಣ ಗುಡಿಸಲಗಳನ್ನು ಕಟ್ಟಿಕೊಂಡು ಜೀವಿಸುತ್ತಾರೆ. ಮಳೆಗಾಲದಲ್ಲಿ ಹವೆಯು ಚನ್ನಾಗಿ ಇರುತ್ತದೆ. ಆದರೆ ಉಳಿದ ದಿವಸಗಳಲ್ಲಿ ಗಿಡಗಳ ಎಲೆಗಳು ನೀರಿನಲ್ಲಿ ಬಿದ್ದು ಕೊಳೆತು ಗುಂಗಾಡು ಮುಂತಾದ ಹುಳಗಳಾಗುತ್ತವೆ. ನೀರಾದರೂ ಮಲೆತು ಬಹಳ ಅನಾರೋಗ್ಯಕರವಾಗುತ್ತದೆ. ಆದ್ದರಿಂದ ಜನರು ಅಶಕ್ತರೂ, ಡುಮ್ಮ ಹೊಟ್ಟೆಯವರೂ ಆಗಿರುತ್ತಾರೆ. ಕೆಲವರು ಬೇಟೆಯಾಡಿ ಹೊಟ್ಟೆ ತುಂಬಿಕೊಳ್ಳುತ್ತಾರೆ. ಈ ಕಾನನದ ಪ್ರದೇಶದಲ್ಲಿ ಸಾಕುದನಗಳು ಇರುವದಿಲ್ಲ. ಆದರೆ ಹುಲಿ, ಕರಡಿ, ಕಾಡುಕೋಣ, ಕಾಡಾನೆಗಳು ಮಾತ್ರ ಅಲ್ಲಲ್ಲಿ ಕಂಡುಬರುತ್ತವೆ. ನಾನಾ ತರದ ಹಾವುಗಳು, ಪಕ್ಷಿಗಳು, ಕ್ರಿಮಿಕೀಟಕಗಳು ಹೆಚ್ಚಾಗಿರುತ್ತವೆ. ಹಲ್ಲಿಗಳೂ ಓತಿಕಾಟುಗಳೂ ಬಹುದೊಡ್ಡವು. ಕಾಡಾನೆಗಳ ಹಿಂಡುಗಳು ಮೈಸೂರು ಪ್ರಾಂತದೊಳಗಿನ ಅರಣ್ಯಗಳಿಂದ ಇತ್ತಕಡೆಗೆ ಬರುವವು. ಜನರು ತಲೆಗೆ ಒಂದು ರುಮಾಲು, ಲಂಗೋಟಿ, ಹೊದ್ದುಕೊಳ್ಳಲಿಕ್ಕೆ ವಸ್ತ್ರ ಇವುಗಳನ್ನಷ್ಟೇ ಉಪಯೋಗಿಸುತ್ತಾರೆ. ಜನಜೀವನವು ಕಷ್ಟತರವಾದದ್ದು.

ಸರಕಾರದ ಅರಣ್ಯಖಾತೆಯವರು ಈ ಗುಡ್ಡಗಳಲ್ಲಿ ತೇಗಿನ ದೊಡ್ಡ ದೊಡ್ಡ ತೋಟಗಳನ್ನು ಮಾಡಿದ್ದಾರೆ. ಆದ್ದರಿಂದ ಈ ಗುಡ್ಡಗಾಡು ಜನರಿಗೆ ಈ ತೋಟಗಳಲ್ಲಿ ಉದ್ಯೋಗವು ದೊರಕಿರುತ್ತದೆ. ತೇಗಿನ ಮರಗಳನ್ನು ಕಡಿದು, ಮುಂಡಿಗೆಗಳನ್ನು ಗಾಡಿಗಳಲ್ಲಿ ಹಾಕಿಕೊಂಡು ಹತ್ತರದ ಡಿಪೋ

ಗಳಿಗಾಗಲೀ, ಕಟ್ಟಿಗೆ ಕೊರೆಯುವ ಗಿರಣಿಗಳಿಗಾಗಲೀ ಒಯ್ಯುತ್ತಾರೆ. ಇತ್ತಲಾಗಿ ದಾಂಡೇಲೀ ಎಂಬ ಸ್ಥಳದಲ್ಲಿ ಕಟ್ಟಿಗೆಯ ಸಂಗ್ರಹವಿಟ್ಟಿದ್ದು, ಅಲ್ಲಿಯ ವರೆಗೆ ರೇಲು ದಾರಿಯನ್ನು ಒಯ್ದಿರುತ್ತಾರೆ. ಕರ್ನಾಟಕದ ಎಲ್ಲ ಭಾಗಗಳಿಂದಲೂ ವ್ಯಾಪಾರಸ್ಥರು ಇಮಾರತಿನ ಕಟ್ಟಿಗೆಗಳನ್ನೂ, ಬಿದಿರು ಗಳನ್ನೂ ಕೊಂಡುಕೊಳ್ಳಲಿಕ್ಕೆ ಇಲ್ಲಿಗೆ ಬರುತ್ತಾರೆ. ಇತ್ತಲಾಗಿ ಪ್ಲಾಯ ಊಡ್ (ಪದರು ಹಲಗೆಗಳ) ತಯಾರಿಸುವ ಕಾರಖಾನೆ ಹೊರಟಿದೆ.

ಈ ಗುಡ್ಡಗಾಡು ಪ್ರದೇಶದಲ್ಲಿ ಕಬ್ಬಿಣ, ಮ್ಯಾಂಗ್ಯಾನೀಜ, ಬಂಗಾರ ಮುಂತಾದ ಖನಿಜಗಳು ಸಿಗುತ್ತವೆ. ಬಂಗಾರವು ಕಪ್ಪದ ಗುಡ್ಡದಲ್ಲಿ ಸಿಗು ವದು. ಮ್ಯಾಂಗನೀಜದ ಅದರನ್ನು ಪರದೇಶಗಳಿಗೆ ಉಕ್ಕು ತಯಾರಿಸಲಿಕ್ಕೆ ಕಳಿಸುತ್ತಾರೆ. ಲೋಂಡಾದಿಂದ ಮುರ್ಮಗೋವಾ ಬಂದರದ ವರೆಗೆ ರೇಲು ದಾರಿಯನ್ನು ಮಾಡಿದ್ದಾರೆ. ಈ ದಾರಿಯಿಂದ ಹೋಗುವಾಗ ಈ ಮಲೆನಾಡಿನ ಸೊಬಗು ಬಹು ಮನೋಹರವಾಗಿರುತ್ತದೆ. ಪುಣೆಯಿಂದ ಹರಿಹರಕ್ಕೆ ಹೋಗುವ ರೇಲುದಾರಿಯು ಖಾನಾಪೂರದಿಂದ ಗುಂಜೀ, ಲೋಂಡಾ, ನಾಗರ ಗಳ್ಳಿ, ಅಳಣಾವರಗಳ ಮೇಲಿಂದ ಧಾರವಾಡದ ವರೆಗೆ ಈ ಹಳವುಗಳೊಳ ಗಿಂದಲೇ ಹಾದು ಹೋಗುತ್ತದೆ. ಆದ್ದರಿಂದ ಇವೆಲ್ಲ ಸ್ಥಳಗಳಿಂದ ಇಮಾ ರತಿನ ಕಟ್ಟಿಗೆಗಳು, ಬಿದಿರು ಇದ್ದಲಿ ಮುಂತಾದವುಗಳು ಕರ್ನಾಟಕದ ಎಲ್ಲ ಭಾಗಗಳಿಗೆ ಹೋಗುತ್ತವೆ.

## ಪ್ರಶ್ನೆಗಳು

೧. ಮಲೆನಾಡು ಎಂಬ ಹೆಸರು ಏಕೆ ಬಂದಿತು?

೨. ಮಲ್ಲಾಡದೊಳಗಿನ ಜನಜೀವನವನ್ನು ಅವರ ಉದ್ಯೋಗ ವ್ಯವಸಾಯಗಳನ್ನು ಹೇಳಿರಿ.

೩. ಈ ಭಾಗದ ಮುಖ್ಯವಾದ ಹುಟ್ಟುವಳಿಗಳು ಯಾವವು?

೪. ಇಲ್ಲಿಯ ಪ್ರಾಣಿಗಳು ಯಾವವು? ಇಲ್ಲಿ ಸಾಕು ದನಗಳು ಕಡಿಮೆ. ಯಾಕೆ?

೫. ಮಲೆನಾಡಿನ ಸೊಬಗನ್ನು ನೋಡಬೇಕಾದರೆ ಯಾವ ಯಾವ ಮಾರ್ಗಗಳಿಂದ ಪ್ರವಾಸಮಾಡಲು ಅನುವಾಗಿರುತ್ತದೆ?

# ಮುಂಬಯಿ ಕರ್ನಾಟಕ (ಮುಂದೆ ಸಾಗಿದ್ದು)

## ಮಲ್ನಾಡರ ಅಂಚು ಅಥವಾ ಸೆರಗು

ಈ ಭಾಗವು ಸಹ್ಯಾದ್ರಿಯ ಪೂರ್ವಕ್ಕೆ ಸುಮಾರು ೫೦ ಮೈಲು ಅಗಲವಾದ ಪಟ್ಟಿಯು ನೈಋತ್ಯದಿಂದ ಈಶಾನ್ಯ ದಿಕ್ಕಿನಲ್ಲಿ ಹಬ್ಬಿರುತ್ತದೆ. ಇದರೊಳಗೆ ಕಾರವಾರ ಜಿಲ್ಲೆಯೊಳಗಿನ ಘಟ್ಟದ ಮೇಲಿನ ಸಿರಸಿ, ಸಿದ್ದಾಪುರ, ಯಲ್ಲಾಪುರ ಮತ್ತು ಹಲಿಯಾಳ ಎಂಬ ನಾಲ್ಕು ತಾಲೂಕುಗಳು, ಧಾರವಾಡ ಜಿಲ್ಲೆಯ ಹಿರೇಕೆರೂರ, ಹಾನಗಲ್ಲ, ಕಲಘಟಗಿ, ಧಾರವಾಡ ಈ ನಾಲ್ಕು ತಾಲೂಕುಗಳು ಮತ್ತು ಹುಬ್ಬಳ್ಳಿ ಬಂಕಾಪೂರ ತಾಲೂಕುಗಳ ಪಶ್ಚಿಮಭಾಗವು ಬೆಳಗಾವಿ ಜಿಲ್ಲೆಯೊಳಗಿನ ಖಾನಾಪೂರ, ಬೈಲಹೊಂಗಲ, ಬೆಳಗಾವಿ, ಹುಕ್ಕೇರಿ ಈ ನಾಲ್ಕು ತಾಲೂಕುಗಳು ಮತ್ತು ಚಿಕ್ಕೋಡಿ ತಾಲೂಕಿನ ಪಶ್ಚಿಮ ಭಾಗವು ಸಮಾವೇಶವಾಗುತ್ತವೆ. ಈ ಭಾಗವು ಸಮುದ್ರ ಸಪಾಟಿಯಿಂದ ೧೫೦೦ ರಿಂದ ೨೫೦೦ ಫೂಟು ಎತ್ತರವಾದ ತಪ್ಪಲು ಭೂಮಿಯಾಗಿರುತ್ತದೆ. ಇಲ್ಲಿ ವರುಷಕ್ಕೆ ಸರಾಸರಿ ೩೫ ಇಂಚಿನಿಂದ ೫೦ ಇಂಚಿನವರೆಗೆ ಮಳೆಯು ಆಗುತ್ತದೆ. ಈ ಭಾಗದಲ್ಲಿ ಹೇಳಿಕೊಳ್ಳುವಂಥ ಹೊಳೆಗಳಿರುವದಿಲ್ಲ. ಆದರೆ ಈ ಪ್ರದೇಶದ ಸಮೀಪದಲ್ಲಿಯೇ ಕರ್ನಾಟಕದೊಳಗಿನ ಘಟಪ್ರಭಾ, ಮಲಪ್ರಭಾ ಹೊಳೆಗಳು ಉಗಮವಾಗಿ ಪೂರ್ವ ದಿಕ್ಕಿಗೆ ಹರಿಯುತ್ತವೆ.

ಈ ಭಾಗದಲ್ಲಿ ಮಳೆಯು ನಿಶ್ಚಿತವಾಗಿರುವದರಿಂದಲೂ ಭೂಮಿಯು ಬೆಳೆಯುಳ್ಳದ್ದಿರುವದರಿಂದಲೂ ಭತ್ತ, ಕಬ್ಬು, ಚನ್ನಾಗಿ ಬೆಳೆಯುತ್ತವೆ. ಅಲ್ಲಲ್ಲಿ ದಟ್ಟವಾದ ಅಡವಿಗಳಾದರೂ ಇರುತ್ತವೆ. ಹವೆಯು ತಂಪಾಗಿರುತ್ತದೆ. ಆದರೆ ತುಸು, ಅನಾರೋಗ್ಯಕರವಾದದ್ದು. ಒಕ್ಕಲಿಗರು ಸುಖಿಗಳು. ಭತ್ತವನ್ನು ತೆಗೆದ ಮೇಲೆ ಬಟಕಡಲೆ, ಕಾಯಿಪಲ್ಯ, ಬಟಾಟೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಜೂನ್ ತಿಂಗಳಿನಲ್ಲಿ ಮಳೆಯು ಆರಂಭವಾದ ಕೂಡಲೆ ಭತ್ತವನ್ನು ಬಿತ್ತಿ ಗದ್ದೆಗಳಲ್ಲಿ ನೀರು ನಿಲ್ಲಿಸುತ್ತಾರೆ. ಒಂದೇ ಸವನೇ ಮಳೆ ಸುರಿಯುತ್ತಿರುವಾಗ ಮೊಳಕಾಲುಮಟ್ಟ ನೀರಿನೊಳಗೆ ನಿಂತು ಇವರು ಹೊಲಗಳಲ್ಲಿ ದುಡಿಯುತ್ತಾರೆ. ಆದ್ದರಿಂದ ಇವರು ದೋತರವನ್ನು ಉಟ್ಟುಕೊಳ್ಳದೆ

ಲಂಗೋಟಿಯನ್ನು ಮಾತ್ರ ಹಾಕಿಕೊಳ್ಳುತ್ತಾರೆ. ಮಳೆಯು ಹತ್ತಬಾರದೆಂದು ಬಿದಿರು ಮತ್ತು ಎಲೆಗಳಿಂದ ಹೆಣೆದ ಗೊರಬನ್ನು ತಲೆಯ ಮೇಲೆ ಇಟ್ಟುಕೊಳ್ಳುತ್ತಾರೆ. ಮನೆಗಳನ್ನು ಕಲ್ಲುಮಣ್ಣಿನಿಂದ ಕಟ್ಟಿ ಮೇಲೆ ಇಳಿಜಾರಾದ ಹಂಚಿನ ಚಪ್ಪರಗಳನ್ನು ಹಾಕುತ್ತಾರೆ. ಇಲ್ಲಿ ಹಳ್ಳಿಗಳೇ ಬಹಳ. ಮನೆಗಳನ್ನು ಒಂದಕ್ಕೊಂದು ಹತ್ತಿ ಕಟ್ಟುತ್ತಾರೆ.

**ಬೆಳಗಾವಿ, ಧಾರವಾಡ, ಹುಬ್ಬಳ್ಳಿ** ಎಂಬ ಪಟ್ಟಣಗಳು ಈ ಭಾಗದಲ್ಲಿ ಬರುತ್ತವೆ. **ಬೆಳಗಾವಿ**ಯಲ್ಲಿ ದಂಡಿನ ಠಾಣ್ಯವಿದ್ದು, ಊರ ಪೂರ್ವಭಾಗದಲ್ಲಿ ಒಂದು ಹಳೇ ಕೋಟೆಯುಂಟು. ಅದನ್ನು ಅಸದ್‌ಖಾನನೆಂಬ ಸರದಾರನು ೧೫ನೇ ಶತಮಾನದಲ್ಲಿ ಕಟ್ಟಿಸಿದನು. ಈಗ ಆ ಕೋಟೆಯೊಳಗೆ ಸರಕಾರೀ ಕಚೇರಿಗಳೂ, ಕಾಮದಾರರ ಬಂಗಲೆಗಳೂ ಇರುತ್ತವೆ. ಕೋಟೆಯ ಸುತ್ತಲೂ ಕಂದಕವಿರುತ್ತದೆ. ಬೆಳಗಾವಿಯ ಹತ್ತರ **ಶಹಾಪೂರ**ವೆಂಬ ಪಟ್ಟಣವು ಬಂಗಾರ ಬೆಳ್ಳಿಯ ವಡವೆ, ಸೀರೆ-ಖಣ, ತಾಮ್ರ-ಹಿತ್ತಾಳಿಯ ಪಾತ್ರೆ ಮುಂತಾದವುಗಳ ಸಲುವಾಗಿ ಪ್ರಸಿದ್ಧವಾಗಿರುತ್ತದೆ. ಬೆಳಗಾವಿಯಲ್ಲಿ ಲಿಂಗರಾಜ ಮತ್ತು ಪಾರ್ವತೀದೇವೀ ಎಂಬ ಎರಡು ಕಾಲೇಜಗಳೂ, ಶಿಕ್ಷಕರ ಮತ್ತು ಕಾಯಿದೆಯ ಕಾಲೇಜುಗಳೂ, ಎಷ್ಟೋ ಹಾಯಸ್ಕೂಲುಗಳೂ ಇರುತ್ತವೆ. ಇಲ್ಲಿಯ ಹವೆಯು ಬೇಸಿಗೆಯಲ್ಲಿ ಬಹಳ ಆಲ್ಹಾದಕರವಾಗಿರುವದರಿಂದ, ಎಷ್ಟೋ ಜನರು ಬೇಸಿಗೆಯಲ್ಲಿ ಇಲ್ಲಿ ಬಂದು ನಿಲ್ಲುತ್ತಾರೆ. ಬೆಳಗಾವಿಯಿಂದ ೬ ಮೈಲಿನ ಮೇಲೆ ಸಂಬರಗಿಯ ಹತ್ತರ ಯುದ್ಧ ಕಾಲದಲ್ಲಿ ವಿಮಾನ ನಿಲ್ದಾಣ (ಎರೋಡ್ರೊಮ) ವನ್ನು ಕಟ್ಟಿದ್ದಾರೆ. ಅಲ್ಲಿ ಈಗ ಸೈನ್ಯ ಶಿಕ್ಷಣ ಕೊಡುವ ಕೇಂದ್ರವನ್ನು ಮಾಡಿರುತ್ತಾರೆ. ಅದರಂತೆ ಬೆಳಗಾವಿಯಲ್ಲಿ ಸೈನ್ಯದೊಳಗಿನ ಅಧಿಕಾರಿಗಳ ಮಕ್ಕಳ ಸಲುವಾಗಿ ಉಚ್ಚ ಶಿಕ್ಷಣವನ್ನು ಕೊಡುವ ಶಾಲೆಯು ಇರುತ್ತದೆ. ಹಿಂದುಸ್ಥಾನದೊಳಗಿನ ಇಂಥ ಕೆಲವೇ ಶಾಲೆಗಳಲ್ಲಿ ಇದೊಂದಾಗಿರುತ್ತದೆ. **ಧಾರವಾಡ**ವು ಕರ್ನಾಟಕದ ಕೇಂದ್ರವಾಗಿದ್ದು ಅಲ್ಲಿ ಸರಕಾರೀ ಕಾಲೇಜವೂ, ಪ್ರಾಥಮಿಕ ಶಿಕ್ಷಕ-ಶಿಕ್ಷಕಿಯರ ಕಾಲೇಜುಗಳೂ ಎಷ್ಟೋ ಹಾಯಸ್ಕೂಲುಗಳೂ ಇರುತ್ತವೆ. ಇತ್ತಲಾಗಿ ಅಲ್ಲಿ ಒಕ್ಕಲತನ ಕಾಲೇಜವನ್ನು ಸ್ಥಾಪಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯವು ಇಲ್ಲಿಯೇ ಇರುತ್ತದೆ. ಊರು ಸಣ್ಣ ಸಣ್ಣ ದಿನ್ನೆಗಳ ಮೇಲೆ ಹಬ್ಬಿರುವದು. ಮುಗದವೆಂಬ ಹಳ್ಳಿಯ ಹತ್ತರ ಭತ್ತ ಬೆಳೆಯುವ ಫಾರ್ಮ ಇರುತ್ತದೆ. ಧಾರವಾಡ ಹುಬ್ಬಳ್ಳಿಗಳ ನಡುವೆ

ಡಾಂಬರದಿಂದ ಮಾಡಿದ ಉತ್ತಮವಾದ ಲೈನ್ ದಾರಿ ಇದ್ದು ಒಂದೇ ಸವನೇ ಮೋಟಾರುಗಳ ಓಡಾಟವು ನಡೆಯುತ್ತದೆ. ಇದಲ್ಲದೆ ಧಾರವಾಡ ಹುಬ್ಬಳ್ಳಿ ಗಳ ನಡುವೆ ಲೋಕಲ್ ಉಗಿಬಂಡಿಗಳಾದರೂ ಬಂದು ಹೋಗುತ್ತವೆ. ಹುಬ್ಬಳ್ಳಿಯು ಕರ್ನಾಟಕದೊಳಗಿನ ವ್ಯಾಪಾರ-ಉದ್ಯೋಗಗಳ ಕೇಂದ್ರ



ಆಕೃತಿ ೫೬ ಧಾರವಾಡದ ಕರ್ನಾಟಕ ಕಾಲೇಜ

ವಾಗಿರುತ್ತದೆ. ಮುಂಬಯಿ ಕರ್ನಾಟಕದೊಳಗೆ ಇದರಷ್ಟು ದೊಡ್ಡ ಪಟ್ಟಣವು ಮತ್ತೊಂದಿಲ್ಲ. ಇಲ್ಲಿ ನೂಲಿನ ಮತ್ತು ನೇಯುವ ಗಿರಣಿಗಳುಂಟು. ಎಮ್. ಎಸ್. ಎಮ್. (ದಕ್ಷಿಣ ರೇಲ್ವೆ) ರೇಲ್ವೆಯ ವರ್ಕಶಾಪ ಎಂಬ ಕಾರಖಾನೆ ಯುಂಟು. ಹುಬ್ಬಳ್ಳಿಯಲ್ಲಿ ಇತ್ತಲಾಗಿ ಎಂಜನಿಯರಿಂಗ, ಕಮರ್ಸಿಯಲ್ (ವ್ಯಾಪಾರಿ) ಕಾಲೇಜಗಳಾಗಿರುತ್ತವೆ. ಹುಬ್ಬಳ್ಳಿಯಿಂದ ಗದಗ ಹೊಸಪೇಟೆಗಳ ಮೇಲಿಂದ ಗುಂತಕಲ್ಲದ ವರೆಗೂ, ವಿಜಾಪುರ, ಬಾಗಿಲುಕೋಟೆಗಳ ಮೇಲಿಂದ ಸೊಲ್ಲಾಪುರದ ವರೆಗೂ ರೇಲುದಾರಿಯ ಶಾಖೆಗಳು ಇರುತ್ತವೆ. ಪುಣೆ-ಹರಿಹರ ಮಾರ್ಗದಿಂದಲೇ ಈ ಶಾಖೆಯು ಹೋಗಿರುವದರಿಂದ ಹುಬ್ಬಳ್ಳಿಯು ರೇಲ್ವೆಯ

ದೊಡ್ಡ ಜಂಕ್ಷನ್ ಸ್ಟೇಶನವಾಗಿರುತ್ತದೆ. ಇಲ್ಲಿಯ ಆರೂಢ ಸ್ವಾಮಿಗಳ ಮಠವು ಬಹು ಪ್ರಸಿದ್ಧವಾದದ್ದು. ಅಲ್ಲಿ ಪ್ರತಿವರುಷ ಮಹಾಶಿವರಾತ್ರಿಗೆ ದೊಡ್ಡ ಜಾತ್ರೆಯಾಗುತ್ತದೆ. ಒಂದು ಲಕ್ಷ ಜನರು ಕೂಡುತ್ತಾರೆ. ಧಾರವಾಡ ಜಿಲ್ಲೆಯೊಳಗಿನ ಸುಮಾರು ೩/೪ ಕ್ಕಿಂತ ಹೆಚ್ಚು ಅರಳೀ ವ್ಯಾಪಾರವು ಇಲ್ಲಿಂದಲೇ ಆಗುವದು. ಆದ್ದರಿಂದ ಮುಂಬಯಿ ಪ್ರಾಂತದ ಬೇರೆ ಬೇರೆ ಸ್ಥಳಗಳಿಂದ ಎಷ್ಟೋ ವ್ಯಾಪಾರಸ್ಥರು ಇಲ್ಲಿ ಬಂದು ನಿಂತಿದ್ದಾರೆ.

ಈ ಭಾಗದ ಪಶ್ಚಿಮದಲ್ಲಿ ದಟ್ಟವಾದ ಅಡವಿಗಳು ಇರುವದರಿಂದ ಬೆಳಗಾವಿ, ದಾಂಡೇಲಿ ಮುಂತಾದ ಸ್ಥಳಗಳಲ್ಲಿ ಇಮಾರತಿಯ ಕಟ್ಟಿಗೆಗಳ ವ್ಯಾಪಾರವು ದೊಡ್ಡ ಪ್ರಮಾಣದಿಂದ ಸಾಗುತ್ತದೆ.

ಒಕ್ಕಲತನವನ್ನು ಬಿಟ್ಟರೆ ಈ ಭಾಗದಲ್ಲಿ ನೇಕಾರಿಕೆ, ಗಿಡಗಳನ್ನು ಕಡಿಯುವದು, ಮುಖ್ಯವಾದ ಉದ್ಯೋಗಗಳಾಗಿರುತ್ತವೆ. ಬೆಳಗಾಂವ ಜಿಲ್ಲೆಯ ಖಾನಾಪುರದ ಹತ್ತರ ಕೆಂಪು ಹಂಚಿನ ಕಾರಖಾನೆಗಳಿದ್ದು ಇತ್ತಲಾಗಿ ಕಪ್ಪು-ಬಸಿಗಳನ್ನು ತಯಾರಿಸುವ ಕಾರಖಾನೆಯ ಯೋಜನೆಯನ್ನೊಂದು ಮಾಡಿರುತ್ತಾರೆ. ಹತ್ತರದಲ್ಲಿ ಇವುಗಳಿಗೆ ಬೇಕಾದ ಕೆಂಪು ಮತ್ತು ಬಿಳೀ ಮಣ್ಣುಗಳು ಸಿಗುತ್ತವೆ.

## ಪ್ರಶ್ನೆಗಳು

೧. ಮಲ್ಲಾಡ ಸೆರಗಿನೊಳಗೆ ಮುಂಬಯಿ ಕರ್ನಾಟಕದ ಯಾವ ಯಾವ ಭಾಗಗಳು ಬರುತ್ತವೆ?

೨. ಇಲ್ಲಿಯ ಹವಾಮಾನವನ್ನೂ, ಹುಟ್ಟುವಳಿಗಳನ್ನೂ ಹೇಳಿರಿ.

೩. ಇಲ್ಲಿಯ ಜೀವನವನ್ನು ವರ್ಣಿಸಿರಿ.

೪. ಇಲ್ಲಿಯ ಮುಖ್ಯ ಪಟ್ಟಣಗಳು ಯಾವವು? ಅವು ಯಾತರ ಸಲುವಾಗಿ ಪ್ರಸಿದ್ಧವಾಗಿರುತ್ತವೆ.

೫. ಈ ಭಾಗದೊಳಗಿನ ಮುಖ್ಯವಾದ ಕ್ಷೇತ್ರಗಳು ಯಾವವು? ಅವು ಯಾಕೆ ಪ್ರಸಿದ್ಧಿಯನ್ನು ಹೊಂದಿರುತ್ತವೆ?

# ಮುಂಬಯಿ ಕರ್ನಾಟಕವು (ಮುಂದೆ ಸಾಗಿದ್ದು)

## ಬೆಳವಲು ಅಥವಾ ಬೈಲುನಾಡು

ಈ ಭಾಗವು ಮಲ್ಲಾಡಸೆರಗಿನಿಂದ ಪೂರ್ವಕ್ಕೆ ಮುಂಬಯಿ ಇಲಾಖೆಯ ಗಡಿಯ ವರೆಗೆ ಹಬ್ಬಿರುತ್ತದೆ. ಇದರ ಪಶ್ಚಿಮ ಭಾಗದಲ್ಲಿ ಸಹ್ಯಾದ್ರಿಯ ಸಣ್ಣ ಸಣ್ಣ ಗುಡ್ಡಗಳ ಶಾಖೆಗಳು ಅಲ್ಲಲ್ಲಿ ಚಾಚಿರುತ್ತವೆ. ಪೂರ್ವಕ್ಕೆ ಹೋದ ಹಾಗೆ ಬೈಲು ಪ್ರದೇಶವು ಹೆಚ್ಚಾಗುತ್ತದೆ. ಕೆಲವು ಕಡೆಗೆ ತಗ್ಗು ದಿನ್ನೆಗಳಿರುತ್ತವೆ. ಇದರಲ್ಲಿ ಕಪ್ಪು ನೆಲವೇ ಹೆಚ್ಚು. ಗುಡ್ಡಗಳ ಎಡಬಲಗಳಲ್ಲಿ ಮಾತ್ರ ಮಸಾರಿ ಮರಡಿಗಳಿರುತ್ತವೆ. ಈ ಭಾಗವು ಮುಖ್ಯವಾಗಿ ೫ ಹೊಳೆಗಳ ಕೊಳ್ಳಗಳಿಂದುಂಟಾಗಿರುತ್ತದೆ. ಇದರಲ್ಲಿ ಭೀಮಾ ಮತ್ತು ಕೃಷ್ಣಾ ಹೊಳೆಗಳ ನಡುವಿನ ಭಾಗ, ಮತ್ತು ಕೃಷ್ಣಾ-ತುಂಗಭದ್ರಾ ಇವುಗಳ ನಡುವಿನ ಭಾಗವೆಂದು ಎರಡು ಭಾಗಗಳನ್ನು ಮಾಡಬಹುದು. ಎರಡನೇ ಭಾಗವು ಮುಖ್ಯವಾಗಿ ಘಟಪ್ರಭಾ ಮತ್ತು ಮಲಪ್ರಭಾ ಕೊಳ್ಳಗಳಿಂದುಂಟಾಗಿರುವದರಿಂದ, ಅದಕ್ಕೆ ಘಟಪ್ರಭಾ-ಮಲಪ್ರಭಾ ಕೊಳ್ಳವೆಂದು ಕರೆಯಬಹುದು. ಈ ಪ್ರಕಾರವಾಗಿ ಈ ಭಾಗದಲ್ಲಿ ಉತ್ತರದ ಮೇರೆಯಿಂದ ಕ್ರಮವಾಗಿ ಭೀಮಾ, ಕೃಷ್ಣಾ, ಘಟಪ್ರಭಾ, ಮಲಪ್ರಭಾ ಮತ್ತು ತುಂಗಭದ್ರಾ ಎಂಬ ಐದು ಮುಖ್ಯವಾದ ಹೊಳೆಗಳಿವೆ. ಇದಲ್ಲದೇ ಅಲ್ಲಲ್ಲಿ ಸಣ್ಣ ಸಣ್ಣ ಎಷ್ಟೋ ಉಪನದಿಗಳಿರುತ್ತವೆ. ಇವುಗಳಲ್ಲಿ ಕೃಷ್ಣಾ ಹೊಳೆಯೇ ಎಲ್ಲಕ್ಕೂ ದೊಡ್ಡದು. ಉಳಿದ ನಾಲ್ಕು ಹೊಳೆಗಳು ಕೃಷ್ಣೆಗೆ ಬೇರೆ ಬೇರೆ ಕಡೆಯಲ್ಲಿ ಹೋಗಿ ಕೂಡುತ್ತವೆ. ಆದ್ದರಿಂದ ಕೃಷ್ಣೆಗೆ ಹಿರೇ ಹೊಳೆಯಂತಲೂ ಅನ್ನುತ್ತಾರೆ. ಇವೆಲ್ಲ ಹೊಳೆಗಳು ಪೂರ್ವವಾಹಿನಿಯಾಗಿರುವದರಿಂದ ಬೆಳವಲನಾಡು ಪಶ್ಚಿಮದಿಂದ ಪೂರ್ವಕ್ಕೆ ಇಳುಕಲಾಗಿರುತ್ತದೆಂಬುದು ಸ್ಪಷ್ಟವದೆ.

ಈ ಭಾಗದಲ್ಲಿ ಬೆಳಗಾವ ಜಿಲ್ಲೆಯ ಪೂರ್ವಭಾಗ, ಧಾರವಾಡ ಜಿಲ್ಲೆಯ ಪೂರ್ವಭಾಗ, ಇಡೀ ವಿಜಾಪುರ ಜಿಲ್ಲೆ ಇವು ಸಮಾವೇಶವಾಗುತ್ತವೆ. ಈ ಭಾಗವೆಲ್ಲ ಸಮುದ್ರ ಸಪಾಟಿಯಿಂದ ೧೮೦೦ ರಿಂದ ೨೦೦೦ ಫೂಟು ಎತ್ತರವಾದ ತಪ್ಪಲು ಭೂಮಿಯಾಗಿರುತ್ತದೆ. ಕೃಷ್ಣಾ ನದಿಯ ಉತ್ತರ ದಂಡೆಯಿಂದ ಭೀಮಾ ನದಿಯ ದಕ್ಷಿಣದ ದಂಡೆಯ ವರೆಗೆ ಇರುವ ಈ ಭಾಗದಲ್ಲಿ ವಿಜಾಪುರ ಜಿಲ್ಲೆಯು

ಕಟ್ಟಿದ ಕೋಟೆಗಳಿರುತ್ತವೆ. ಸುತ್ತಲಿರುವ ಪ್ರದೇಶಗಳನ್ನು ರಕ್ಷಿಸಲಿಕ್ಕೆ ಈ ಕೋಟೆಗಳ ಉಪಯೋಗವಾಗುತ್ತಿತ್ತು. ಬಾದಾಮಿ, ಗೋಕಾಕ, ಯರಗಟ್ಟಿ, ಸೌದತ್ತಿ (ಪರಸಗಡ), ತೊರಗಲ್ಲ, ರಾಮದುರ್ಗ, ನರಗುಂದ ಮುಂತಾದ ಕೋಟೆಗಳು ಇತಿಹಾಸ ಪ್ರಸಿದ್ಧವಾಗಿರುತ್ತವೆ.



ಆಕೃತಿ ೫೮ ಹತ್ತಿ ಬಿಡಿಸುವದು

ಬೈಲು ಸೀಮೆಯು ಫಲವತ್ತಾಗಿರುತ್ತದೆ. ಹತ್ತಿಯೇ ಮುಖ್ಯ ಬೆಳೆಯು. ಈ ಭಾಗದೊಳಗೆ ನೈಋತ್ಯದ ಮಳೆಯಾಗುತ್ತದೆ. ಒಮ್ಮೊಮ್ಮೆ ಈಶಾನ್ಯದ ಮಳೆಯಾದರೂ ಬರುತ್ತಿರುತ್ತದೆ. ಭಾದ್ರಪದ ತಿಂಗಳಿನಲ್ಲಿ ಹತ್ತಿಯನ್ನು ಬಿತ್ತುವರು. ಮಕರ ಸಂಕ್ರಾಂತಿಗೆ ಕಾಯಿಗಳಾಗುವವು. ಹೋಳೀ ಹುಣ್ಣಿವೆಗೆ ಹತ್ತಿ ಬಿಡಿಸಲಾರಂಭಿಸುವರು. ಗದಗ, ಬೆಟಗೇರಿ, ಗೋಕಾಕ, ಬೈಲಹೊಂಗಲಗಳಲ್ಲಿ ಹತ್ತಿಯ ವ್ಯಾಪಾರವು ಬಹು ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಗದಗ, ಬೆಟಗೇರಿ, ಬೈಲಹೊಂಗಲದಿಂದ ಅರಳಿಯು ಮುಂಬಯಿಗೆ ಹೋಗುತ್ತದೆ. ಆದರೆ ಗೋಕಾಕ ಪೇಟೆಯ ಅರಳಿಯು ಗೋಕಾಕದ

ಹತ್ತಿರಿರುವ ಗಿರಣಿಯಲ್ಲಿಯೇ ಮಾರುತ್ತದೆ. ಗೋಕಾಕದ ತಡಸಲಿನಿಂದ ಹುಟ್ಟಿಸಿದ ವಿದ್ಯುತ್‌ಶಕ್ತಿಯ ಮೇಲೆ ಗಿರಣಿಯು ನಡೆಯುತ್ತದೆ.

ಈ ಭಾಗದೊಳಗಿನ ಒಕ್ಕಲಿಗರು ಮುಖ್ಯವಾಗಿ ಹಳ್ಳಿಗಳಲ್ಲಿಯೇ ವಾಸಿಸುವರು. ಮನೆಗಳೆಲ್ಲ ಮಣ್ಣು ಕಲ್ಲುಗಳಿಂದ ಕಟ್ಟಿದ್ದು, ಮೇಲು ಮುದ್ದಿಗೆಯನ್ನು ಹಾಕಿರುತ್ತಾರೆ. ಯಾಕೆಂದರೆ ಮಳೆ ಕಡಿಮೆ. ಬೇಸಿಗೆಯಲ್ಲಿ ಈ



ಆಕೃತಿ ೫೯ ಹತ್ತಿಯ ಗಂಟುಗಳನ್ನು ಚಕ್ಕಡಿಯಿಂದ ಸಾಗಿಸುತ್ತಾರೆ

ಮನೆಗಳು ತಂಪಾಗಿರುತ್ತವೆ. ಒಕ್ಕಲಿಗರು ತಲೆಗೆ ರುಮಾಲು ಸುತ್ತುವರು. ದೋತರವನ್ನು ಉಟ್ಟು ಮೈಯಲ್ಲಿ ಅಂಗಿಯನ್ನು ಹಾಕಿಕೊಳ್ಳುವರು. ಹೆಗಲ ಮೇಲೆ ದಪ್ಪಾದ ಉಪ್ಪರಣೆ ಇಲ್ಲವೆ ಕಂಬಳಿಯನ್ನು ಹೊರುವರು. ಇವರು ದನಗಳ ಮೇಲೆ ಬಹು ಅಕ್ಕರತೆಯನ್ನು ಮಾಡುತ್ತಾರೆ. ಆಕಳುಗಳನ್ನು ಮುಖ್ಯವಾಗಿ ಹೋರಿಗಳ ಸಲುವಾಗಿ ಸಾಕುತ್ತಾರೆ. ಹೈನಿನ ಸಲುವಾಗಿ ಎಮ್ಮೆಗಳನ್ನು ಸಾಕುತ್ತಾರೆ. ಮನೆಮನೆಗೆ ಹೈನವಿದ್ದೇ ಇರುವದು. ಹೆಂಗಸರು ಹೈನಿನ ಉದ್ಯೋಗವನ್ನು ಮಾಡುತ್ತಾರೆ. ದೊಡ್ಡ ದೊಡ್ಡ ಹೊಲಗಳನ್ನು ಬೇಸಿಗೆಯಲ್ಲಿ ನೇಗಿಲು ಹೊಡೆದು ಉತ್ಕೃಷ್ಟವಾದ ಎತ್ತುಗಳಿಂದ ಸಾಗು ಮಾಡುತ್ತಾರೆ. ಇತ್ತಲಾಗಿ ಸರಕಾರದವರು ಟ್ರಾಕ್ಟರ ಎಂಬ ಯಂತ್ರಗಳಿಂದ ವಿಸ್ತಾರವಾದ ಹೊಲಗಳನ್ನು ಸಾಗಿಸಲಿಕ್ಕೆ ಉತ್ತೇಜನ ಕೊಡುತ್ತಲಿದ್ದಾರೆ.

ಈ ಭಾಗದಲ್ಲಿ ಮುಂಗಾರಿ ಮತ್ತು ಹಿಂಗಾರಿ ಎರಡೂ ಬೆಳೆಗಳು ಬರುತ್ತವೆ. ಆದ್ದರಿಂದ ದನಕರುಗಳಿಗೆ ಸಾಕಷ್ಟು ಮೇವುಮಿಡಚಿಗಳು ಸಿಗುವದರಿಂದ



ಆಕೃತಿ ೬೦ ಬೆಳವಲದ ಒಕ್ಕಲಿಗರು

ಅವುಗಳ ಆರೈಕೆಯು ಚನ್ನಾಗಿ ಆಗುತ್ತದೆ. ಮುಂಗಾರೀ ಮಳೆಯಾಗಲು ಜೋಳ, ಸಜ್ಜೆ, ಅಡಗಾಳುಗಳನ್ನು ಬಿತ್ತುವರು. ನೆಲಗಡಲೆ, ಕುಸಬೆ, ಎಳ್ಳು, ಮುಂತಾದ ಎಣ್ಣೆಕಾಳುಗಳಾದರೂ ಬೆಳೆಯುತ್ತವೆ. ಸೇಂಗಾ ಒಡೆದು ಕಾಳಿ

ನಿಂದ ಎಣ್ಣೆ ತೆಗೆಯುವ ಗಿರಣಿಗಳು ನರಗುಂದ, ಗೋಕಾಕ, ಬೆಳಗಾವಿ ಮುಂತಾದ ಸ್ಥಳಗಳಲ್ಲಿರುತ್ತವೆ. ಹಿಂಗಾರಿಯಲ್ಲಿ ಗೋದಿ, ಕಡಲೆ, ಜವೆಗೋದಿ, ಹತ್ತಿಗಳನ್ನು ಬಿತ್ತುವರು. ಕಾಲಕ್ಕೆ ಸರಿಯಾಗಿ ಮಳೆಯಾದರೆ ಬೆಳೆಯು ಹುಲುಸಾಗಿ ಬರುವದು. ನೀರಿನ ಸೌಕರ್ಯವಿದ್ದಲ್ಲಿ ಕಬ್ಬು, ಬಾಳೆ, ಗೋವಿನ ಜೋಳ, ಮೆಣಸಿನ ಕಾಯಿಗಳನ್ನು ಬೆಳೆಯುತ್ತಾರೆ. ಬೆಳಗಾವಿ ಜಿಲ್ಲೆ ಯೊಳಗಿನ ಚಿಕ್ಕೋಡಿ, ಹುಕ್ಕೇರಿ ತಾಲೂಕುಗಳಲ್ಲಿ ತಂಬಾಕು, ಕಬ್ಬು, ವಿಳೇದೆಲೆ ಹೆಚ್ಚಾಗಿ ಬೆಳೆಯುತ್ತವೆ. ಈ ಭಾಗದಲ್ಲಿ ಬೆಳೆಯುವ ತಂಬಾಕು ಇಡೀ ಹಿಂದುಸ್ಥಾನದೊಳಗೆ ಮೇಲಾದದ್ದಿರುತ್ತದೆ. **ನಿಪ್ಪಾಣಿ**ಯು ತಂಬಾಕಿನ ಮುಖ್ಯವಾದ ಪೇಟೆಯಾಗಿರುತ್ತದೆ. ಇಲ್ಲಿ ಹಿಂದುಸ್ಥಾನದ ಎಲ್ಲ ಭಾಗಗ ಳಿಂದಲೂ ವ್ಯಾಪಾರಸ್ಥರು ಬರುತ್ತಾರೆ. ಮೃಗಮಳೆಯು ಆರಂಭವಾದ ಕೂಡಲೆ ಒಕ್ಕಲಿಗರು ದನಕರುಗಳನ್ನು ಕಟ್ಟಿಕೊಂಡು ಹೊಲದಲ್ಲಿಯೇ ಹೋಗಿ ಇರು ತ್ತಾರೆ. ಬೈಲಿನೊಳಗಿನ ಆರೋಗ್ಯಕರವಾದ ಹವೆ, ಸಾಕಷ್ಟು ಶುದ್ಧವಾದ ಮೇವು ಮಿಡಚಿ ಆಹಾರಗಳಿಂದ ಒಕ್ಕಲಿಗರೂ ಅವರ ದನಕರುಗಳೂ ಪುಷ್ಟ ವಾಗುವರು. ಹೊಳೆಗಳನ್ನು ಬಿಟ್ಟು ದೂರಿರುವ ಪ್ರದೇಶಗಳಲ್ಲಿ, ಪೂರ್ವ ಕಾಲದಲ್ಲಿ ಕಟ್ಟಿದ ದೊಡ್ಡ ದೊಡ್ಡ ಕೆರೆಗಳಿರುವವು. ಮಳೆ ಕಡಿಮೆಯಾಗಿರು ವದರಿಂದ ಮಳೆಗಾಲದಲ್ಲಿ ಬಿದ್ದ ನೀರನ್ನು ಈ ಕೆರೆಗಳಲ್ಲಿ ಸಂಗ್ರಹಿಸಿಡುತ್ತಾರೆ. ಆದರೆ ಹೊಳೆಗಳ ದಂಡೆಗಳ ಮೇಲಿರುವ ಒಕ್ಕಲಿಗರು ಉಳಿದವರಿಗಿಂತ ಹೆಚ್ಚು ಸಿರಿವಂತರು. ಅವರಿಗೆ ನೀರಿನ ಕೊರತೆಯು ಇರುವದೇ ಇಲ್ಲ.

ಕೃಷ್ಣಾತೀರದ ದನಗಳು ಹೈನಿನ ಸಲುವಾಗಿ ಪ್ರಸಿದ್ಧವಾಗಿರುತ್ತವೆ. ಧೂಪದಾಳದ ಹತ್ತರ ಘಟಾಪ್ರಭಾ ನದಿಗೆ ಕಟ್ಟಿದ ಅಣೆಕಟ್ಟಿನಿಂದ ಸಾವಿರಾರು ಎಕರೆ ಭೂಮಿಗೆ ನೀರಿನ ಪೂರೈಕೆಯಾಗುತ್ತದೆ. ಇಡೀ ಮುಂಬಯಿ ಕರ್ನಾಟಕ ದೊಳಗೆ ಇದೊಂದೇ ಅಣೆಕಟ್ಟು ಇರುವದು. ಇದರಿಂದ ಮುಖ್ಯವಾಗಿ ಗೋಕಾಕ ತಾಲೂಕಿಗೆ ಉಪಕಾರವಾಗಿರುವದು. ಸದ್ಯಕ್ಕೆ ಇದರ ಕಾಲುವೆ ಯನ್ನು ಬೆಳೆಯಿಸಿ ಜಮಖಂಡಿ, ಮುಧೋಳಗಳ ಮೇಲಿಂದ ವಿಜಾಪೂರ ಜಿಲ್ಲೆಯ ವರೆಗೆ ಒಯ್ಯುವ ಕೆಲಸವು ಭರದಿಂದ ನಡೆದಿರುತ್ತದೆ.

ಒಕ್ಕಲತನವನ್ನು ಬಿಟ್ಟರೆ ಈ ಭಾಗದೊಳಗಿನ ಮುಖ್ಯ ಉದ್ಯೋಗ ವೆಂದರೆ ನೇಕಾರಿಕೆ. ಗುಳೇದಗುಡ್ಡ, ಇಳಕಲ್ಲ, ಗದಗ, ಗೋಕಾಕ ಮುಂತಾದ ಸ್ಥಳಗಳಲ್ಲಿ ಸಾವಿರಾರು ಕೈಮಗ್ಗಗಳಿದ್ದು, ಅದರ ಮೇಲಿಂದ ಎಷ್ಟೋ ಜನರು

ಹೊಟ್ಟೆ ತುಂಬಿಕೊಳ್ಳುತ್ತಾರೆ. ಇತ್ತಲಾಗಿ ರಬಕವಿ, ಬನಹಟ್ಟಿಗಳಲ್ಲಿ ಯಂತ್ರದ ಮಗ್ಗಗಳಾದರೂ ಹೆಚ್ಚಾಗಿರುತ್ತವೆ. ಈ ಭಾಗಗಳಿಂದ ಕೈಮಗ್ಗದ ಸೀರೆಗಳು ಕರ್ನಾಟಕದ ಹೊರಗೆ ಬಹುದೊಡ್ಡ ಪ್ರಮಾಣದಿಂದ ಹೋಗುತ್ತವೆ.

ಜೋಳದ ರೊಟ್ಟಿ, ಬೇಳೆ, ಉಳ್ಳೀಗಡ್ಡಿ-ಬಳ್ಳೊಳ್ಳಿಗಳ ಪಲ್ಯೆ ಇವೇ ಇಲ್ಲಿಯ ಒಕ್ಕಲಿಗರ ಮುಖ್ಯವಾದ ಆಹಾರಗಳು. ಒಮ್ಮೊಮ್ಮೆ ಬೇಳೆ-ಕೂಡಿಸಿದ ಅನ್ನವನ್ನೂ, ಹಬ್ಬಹುಣ್ಣಿವೆಗೆ ಹುಗ್ಗಿ, ಹೋಳಿಗೆ, ಕಡಬುಗಳನ್ನೂ ಉಣ್ಣು ವರು. ಇವುಗಳಿಗೆ ಬೇಕಾಗುವ ಬಹುತರ ಎಲ್ಲ ಪದಾರ್ಥಗಳನ್ನು ಅವನು ತನ್ನ ಹೊಲದಲ್ಲಿಯೇ ಬೆಳೆಯುವನು. ಪ್ರತಿಯೊಬ್ಬರಲ್ಲಿ ಹೈನಿನ ದನಗಳಿ ದ್ದರೂ ಊಟದಲ್ಲಿ ಹೈನಿನ ಉಪಯೋಗವು ಕಡಿಮೆ. ಬೆಣ್ಣೆ-ತುಪ್ಪಗಳು ಮುಂಬಯಿ ಪುಣೆಗಳಿಗೆ ಹೋಗುತ್ತವೆ. ಕೃಷ್ಣಾತೀರದ ಬೆಣ್ಣೆಯು ಪ್ರಸಿದ್ಧ ವಾದದ್ದು. ಬೆಳವಲದ ಒಕ್ಕಲಿಗನು ಮೈಕಟ್ಟಿನಿಂದ ಚನ್ನಾಗಿದ್ದು, ಸಶಕ್ತನಾ ಗಿರುವನು. ಒಟ್ಟಿನ ಮೇಲೆ ಬೆಳವಲದ ಒಕ್ಕಲಿಗನು ಸುಖಿಯಾಗಿರುತ್ತಾ ನೆಂಬುದಕ್ಕೆ ಅಡ್ಡಿಯೇ ಇಲ್ಲ. ಇದಕ್ಕೆ ಅಲ್ಲಿಯ ಹವೆಯೂ, ಹುಟ್ಟುವಳಿಗಳೂ ಕಾರಣವಾಗಿರುತ್ತವೆ.

ಘಟಪ್ರಭಾ ಮಲಪ್ರಭಾ ಹೊಳೆಗಳ ಕೊಳ್ಳದಲ್ಲಿ ಭೀಮಾಕೃಷ್ಣಾ ನದಿಗಳ ನಡುವಿನ ಪ್ರದೇಶಕ್ಕಿಂತ ಹೆಚ್ಚು ಪಟ್ಟಣಗಳಿರುತ್ತವೆ. **ಬಾಗಿಲುಕೋಟೆಯು** ಘಟಪ್ರಭೆಯ ದಡದಲ್ಲಿದ್ದು, ವ್ಯಾಪಾರದ ಸಲುವಾಗಿ ಪ್ರಸಿದ್ಧವಾಗಿರುತ್ತದೆ. ಇತ್ತಲಾಗಿ ಅಲ್ಲಿ ಸಿಮೆಂಟಿನ ದೊಡ್ಡ ಕಾರಖಾನೆಯು ಹೊರಟಿರುತ್ತದೆ. **ಬಾದಾಮಿಯ** ಹತ್ತರ ಗುಡ್ಡದೊಳಗೆ ಕೊರೆದ ಗುಡಿಗಳಿರುತ್ತವೆ. **ಗದಗವು** ವ್ಯಾಪಾರದ ಸ್ಥಳವಾಗಿರುತ್ತದೆ. ಇಲ್ಲಿ ನೂಲುವ ಮತ್ತು ನೇಯುವ ಗಿರಣಿಗಳಿ ರುತ್ತವೆ. ಗುಳೇದಗುಡ್ಡದ ಖಣಗಳೂ, ಇಳಕಲ್ಲಿನ ಸೀರೆಗಳೂ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಪ್ರಸಿದ್ಧವಾಗಿರುತ್ತವೆ. **ಬ್ಯಾಡಿಗಿ, ಹಾವೇರಿಗಳು** ಅಡಿಕೆ ಯಾಲಕ್ಕಿಗಳ ವ್ಯಾಪಾರದ ಸಲುವಾಗಿ ಪ್ರಸಿದ್ಧ. **ಗೋಕಾಕವು** ವ್ಯಾಪಾರದ ಪಡಮೂಲೆಯ ಸ್ಥಳವು. ಹತ್ತಿ, ಬೆಲ್ಲ, ನೆಲಗಡಲೆ (ಸೇಂಗಾ) ಗಳ ವ್ಯಾಪಾರವು ಬಹು ದೊಡ್ಡ ಪ್ರಮಾಣದಿಂದ ಸಾಗುತ್ತದೆ. ಇಲ್ಲಿ ಬಣ್ಣದ ಆಟಿಗೆಯ ಸಾಮಾನುಗಳಾಗುತ್ತವೆ. ಗೋಕಾಕದ ಧಬಧಬೆಯನ್ನು ಮತ್ತು ಹೊಳೆಯ ಮೇಲಿನ ತಂತೀ ಪೂಲನ್ನು ನೋಡಲಿಕ್ಕೆ ದೂರದೂರದ ಜನರು ಬರುತ್ತಾರೆ. ೧೭೦ ಫೂಟು ಎತ್ತರದ ಮೇಲಿಂದ ನೀರು ಬೀಳುತ್ತದೆ. ಅಲ್ಲಿ

ನೂಲಿನ ಗಿರಣಿಯಾಗಿರುತ್ತದೆ. **ಸೌದತ್ತಿ**ಯ ಹತ್ತರದ ಯಲ್ಲಮ್ಮನ ಗುಡಿಯು ಸಣ್ಣದೊಂದು ಗುಡ್ಡದ ಮೇಲಿದ್ದು, ಪ್ರತಿವರುಷ ಅಲ್ಲಿ ದೊಡ್ಡ ಜಾತ್ರೆಯಾಗುತ್ತದೆ. **ಜಮುಖಂಡಿ**ಯು ಮೊದಲು ಸಂಸ್ಥಾನದ ರಾಜಧಾನಿಯಾಗಿತ್ತು.



ಆಕೃತಿ ೬೧ ಗೋಕಾಕದ ತಡಸಲು

ಈಗ ಅದು ತಾಲೂಕಿನ ಸ್ಥಳವಾಗಿರುತ್ತದೆ. ಅಲ್ಲಿ ಸುಂದರವಾದ ಕಟ್ಟಡಗಳೂ, ದೇವಾಲಯಗಳೂ ಇರುತ್ತವೆ.

ಮದ್ರಾಸ ಅಂಡ ಸದರ್ನ ಮರಾಠಾ (ದಕ್ಷಿಣ ರೇಲ್ವೆ) ರೇಲ್ವೆಯ ಎರಡು ದಾರಿಗಳು ಈ ಭಾಗದೊಳಗಿಂದ ಹೋಗಿರುತ್ತವೆ. ಒಂದು ಹುಬ್ಬಳ್ಳಿಯಿಂದ ಹೊರಟು ಲೋಂಡಾ, ಬೆಳಗಾವಿ ಮಿರಜಿಗಳ ಮೇಲಿಂದ ಪುಣೆಗೆ ಹೋಗಿರುತ್ತದೆ. ದಾರಿಯಲ್ಲಿ ಘಟಪ್ರಭಾ, ಕೃಷ್ಣಾನದಿಗಳ ಮೇಲೆ ಸುಂದರವಾದ ಪೂಲುಗಳಿರುತ್ತವೆ. ಇನ್ನೊಂದು ಮಾರ್ಗವು ಹುಬ್ಬಳ್ಳಿಯಿಂದ ಹೊರಟು ಗದಗ, ಬಾಗಿಲುಕೋಟೆ ವಿಜಾಪುರಗಳ ಮೇಲಿಂದ ಸೊಲ್ಲಾಪುರಕ್ಕೆ ಹೋಗಿರುತ್ತದೆ. ಈ ಮಾರ್ಗದಲ್ಲಿ ಸೀತೀಮನೆಯ ಹತ್ತರ ಕೃಷ್ಣಾನದಿಗೆ ಪೂಲು ಕಟ್ಟಿದ್ದಾರೆ.

## ಪ್ರಶ್ನೆಗಳು

೧. ಬೆಳವಲಿನಲ್ಲಿ ಮುಖ್ಯವಾಗಿ ಎಷ್ಟು ಭಾಗಗಳಾಗಿರುತ್ತವೆ? ಅವುಗಳ ಹವಾಮಾನವನ್ನು ವರ್ಣಿಸಿರಿ.

೨. ಬೆಳವಲ ಪ್ರದೇಶದ ಮುಖ್ಯವಾದ ಹುಟ್ಟುವಳಿಗಳು ಯಾವವು?

೩. ಇಲ್ಲಿಯ ಒಕ್ಕಲಿಗರ ಜೀವನವನ್ನು ವರ್ಣಿಸಿರಿ.

೪. ಹುಬ್ಬಳ್ಳಿಯಿಂದ ಸೊಲ್ಲಾಪೂರದ ವರೆಗೆ ರೇಲಿನಿಂದ ಪ್ರವಾಸ ಮಾಡಿದರೆ ಮಾರ್ಗದಲ್ಲಿಯ ಭೂಗುಣಗಳನ್ನು ಮತ್ತು ಮುಖ್ಯವಾದ ಸ್ಟೇಶನುಗಳನ್ನು ಹೇಳಿರಿ.

೫. ಕೆಳಗಿನವು ಯಾತರ ಸಲುವಾಗಿ ಪ್ರಸಿದ್ಧ ಅವೆ?
ಅ) ಸೌದತ್ತಿ ಬ) ವಿಜಾಪೂರ ಕ) ನಿಪ್ಪಾಣಿ ಡ) ಗೋಕಾಕ
ಇ) ಬಾದಾಮಿ.

೬. ಬೆಳವಲದಲ್ಲಿ ಹರಿಯುವ ಮುಖ್ಯ ಹೊಳೆಗಳು ಯಾವವು?

೭. ಡೋಣಸಾಲು ಎಂಬ ಹೆಸರು ಏಕೆ ಬಂದಿತು? ಅಲ್ಲಿಯ ಹುಟ್ಟುವಳಿಗಳು ಯಾವವು?

ಪಾಠ ೨೫

## ಕಚ್ಛ, ಕಾಠೇವಾಡ ಮತ್ತು ಗುಜರಾಥ

ಕಚ್ಛಸಂಸ್ಥಾನವು ಬಹುತರವಾಗಿ ಎಲ್ಲವೂ ಉಸುಬಿನ ಅರಣ್ಯವಾಗಿದೆ. ಈ ಉಸುಬಿನ ಬೈಲಿಗೆ ಕಚ್ಛದ ರಣವೆಂದೆನ್ನುತ್ತಾರೆ. ಪ್ರಾಚೀನ ಕಾಲದಿಂದ ಕಚ್ಛದ ಜನರು ಸಮುದ್ರ ಸಂಚಾರಿಗಳೆಂದು ಪ್ರಸಿದ್ಧರಾಗಿದ್ದು, ವ್ಯಾಪಾರದೊಳಗೆ ಬಹಳ ಮುಂದುವರೆದಿರುತ್ತಾರೆ. ಈ ಸಂಸ್ಥಾನದೊಳಗಿನ ಉತ್ತರ ಭಾಗವು ಕೆಲವು ದಿವಸ ನೀರಿನಲ್ಲಿ ಮುಳುಗಿರುತ್ತದೆ. ಕೆಲವು ದಿವಸ ಒಣದಾಗಿರುತ್ತದೆ. **ಭೂಜ**ವೆಂಬದು ಇದರ ರಾಜಧಾನಿಯಾಗಿದ್ದು **ಮಾಂಡವೀ** ಎಂಬ ಬಂದರವಿರುತ್ತದೆ.

ಕಾಠೇವಾಡದ ದ್ವೀಪಕಲ್ಪವು ಚಿಕ್ಕ ಚಿಕ್ಕ ಸಂಸ್ಥಾನಗಳಿಂದ ತುಂಬಿಕೊಂಡಿತ್ತು. ಆದರೆ ಅವೆಲ್ಲವೂ ಈಗ ಒಟ್ಟುಗೂಡಿ ಸೌರಾಷ್ಟ್ರವೆಂಬ ಹೆಸರಿನಿಂದ ಭಾರತದೊಳಗೆ ವಿಲೀನವಾಗಿರುತ್ತದೆ. ಮಧ್ಯಭಾಗದಲ್ಲಿರುವ ಗಿರನಾರ ಎಂಬ ಗುಡ್ಡದ ಭಾಗವನ್ನು ಬಿಟ್ಟರೆ ಉಳಿದ ಭಾಗವೆಲ್ಲ ಬೈಲು ಪ್ರದೇಶವಾಗಿ

ರುತ್ತದೆ. ಹವೆಯು ಉಷ್ಣವಾಗಿದ್ದು ೨೫ರಿಂದ ೩೦ ಇಂಚಿನವರೆಗೆ ಮಳೆಯಾಗುತ್ತದೆ. ಉಷ್ಣಹವೆ ಮತ್ತು ಸಾಕಷ್ಟು ಮಳೆಯಾಗುವದರಿಂದ ಗಿರನಾರ ಪರ್ವತದ ಮೇಲೆ ದಟ್ಟಾದ ಹಳವುಗಳಿರುತ್ತವೆ. ಅಲ್ಲಿ ತೇಗು, ಜಾಲಿ, ಬಸರಿ, ಬೇವು ಮುಂತಾದ ಗಿಡಗಳು ಬೆಳೆಯುತ್ತವೆ. ಇಲ್ಲಿ ಆಗಾಗ್ಗೆ ಸಿಂಹಗಳು ಕಂಡುಬರುತ್ತವೆ. ಹಿಂದುಸ್ಥಾನದೊಳಗೆ ಬೇರೆ ಯಾವ ಕಡೆಗಳಲ್ಲಿಯೂ ಸಿಂಹಗಳು ಸಿಗುವದಿಲ್ಲ. ಸಮುದ್ರ ದಂಡೆಯ ಮೇಲೆ ಅಲ್ಲಲ್ಲಿ ತೆಂಗಿನ ತೋಟಗಳುಂಟು. ಇಲ್ಲಿ ಹೇಳಿಕೊಳ್ಳುವಂಥ ಹೊಳೆಗಳು ಇರುವದಿಲ್ಲ.

ಕಾಠೇವಾಡದೊಳಗಿನ ಒಕ್ಕಲಿಗನು ಕಷ್ಟಮಾಡುವನು. ಅವನು ಬಿಗಿಯಾದ ಚೊಣ್ಣವನ್ನೂ, ಉದ್ದವಾದ ಅಂಗಿಯನ್ನೂ, ತಲೆಗೆ ದೊಡ್ಡ ಮುಂಡಾಸವನ್ನೂ ಹಾಕಿಕೊಳ್ಳುತ್ತಾನೆ. ಬಿಳಿ ಛಾಯದ ಜನರು ದೋತರ ಉಟ್ಟುಕೊಳ್ಳುತ್ತಾರೆ. ಒಕ್ಕಲಿಗರ ಮನೆಗಳು ಮಣ್ಣಿನವಿದ್ದು ಮೇಲೆ ಚಪ್ಪರವಿರುತ್ತದೆ. ಕಾಠೇವಾಡದೊಳಗಿನ ಭೂಮಿಯು ಬಹಳ ಫಲವತ್ತಾಗಿರುವದು. ಆದರೆ ಮಳೆಯ ಪ್ರಮಾಣವು ಕಡಿಮೆ ಇರುವದರಿಂದ ಒಕ್ಕಲಿಗನಿಗೆ ಜೋಳ, ಸೆಜ್ಜೆ, ನೆಲಗಡಲೆಗಳಂಥ ತುಸು ನೀರಿನ ಮೇಲೆ ಬರುವ ಬೆಳೆಗಳನ್ನೇ ಬೆಳೆಯಬೇಕಾಗುತ್ತದೆ. ನೀರಿನ ಸೌಕರ್ಯವಿದ್ದಲ್ಲಿ ಮತ್ತು ಹೊಳೆಗಳ ದಂಡೆಯ ಮೇಲೆ ಗೋದಿ, ಹತ್ತಿ, ಚನ್ನಾಗಿ ಬರುತ್ತವೆ. ಸಮುದ್ರದ ದಂಡೆಯಲ್ಲಿ ಉಪ್ಪಿನ ಆಗರಗಳಿರುತ್ತವೆ. ಗೋದಿಯ ಇಲ್ಲವೇ ಜೋಳದ ರೊಟ್ಟಿ, ಸಾಕಷ್ಟು ಹಾಲು ಮೊಸರು ಅಲ್ಲಿಯ ಮುಖ್ಯ ಆಹಾರಗಳಾಗಿರುತ್ತವೆ. ಸೊರಟೀ ಆಕಳುಗಳೂ ಜಾಫರಾಬಾದೀ ಎಮ್ಮೆಗಳೂ ಹೈನಿನ ಸಲುವಾಗಿ ಪ್ರಸಿದ್ಧವಾಗಿರುತ್ತವೆ. ದನಗಳ ಸಲುವಾಗಿಯೇ ಕಾದಿಟ್ಟ ಹುಲ್ಲುಗದ್ದೆಗಳು, ಸಾಕಷ್ಟು ಹತ್ತೀಕಾಳು, ನೆಲಗಡಲೆಯ ಹಿಂಡಿ ಮತ್ತು ಕಣಿಕಿಗಳಿರುವದರಿಂದ ಇಲ್ಲಿಯ ದನಗಳು ಪೌಷ್ಟಿಕವಾದ ಹೆಡಸುಳ್ಳ ಹಾಲನ್ನು ಕೊಡುತ್ತವೆ.

ಪೋರಬಂದರದ ಹತ್ತರ ಸುಣ್ಣದ ಕಲ್ಲಿನ ಕಣಿಗಳುಂಟು. ಕಟ್ಟಡಗಳನ್ನು ಕಟ್ಟಲಿಕ್ಕೆ ಈ ಕಲ್ಲು ಬಹಳ ಉಪಯೋಗವಾಗುತ್ತದೆ. ಇದಲ್ಲದೇ ಈ ಕಲ್ಲಿನಿಂದ ಸಿಮೆಂಟು ತಯಾರುಮಾಡುವ ಎಷ್ಟೋ ಕಾರಖಾನೆಗಳು ಇತ್ತಲಾಗಿ ಆಗಿರುತ್ತವೆ. ಕಾಠೇವಾಡೀ ಜನರು ಜರದ ಕೆಲಸ, ಕೆತ್ತಿಗೆಯ ಕೆಲಸ, ಕುಸುರಿನ ಕೆಲಸದಲ್ಲಿ ನಿಪುಣರಾಗಿರುತ್ತಾರೆ. **ಭಾವನಗರ, ವೇಥೀ, ವೇರಾವಳ, ಪೋರಬಂದರ, ದ್ವಾರಕಾ, ಓಖಾ** ಎಂಬ ಮಹತ್ವದ ಬಂದರಗಳಿರುತ್ತವೆ.

ಪರದೇಶಗಳಿಂದ ಬರುವ ಉಗಿ ಹಡಗಗಳು ಕೆಲವು ಬಂದರಗಳಿಗೆ ಮುಟ್ಟುವ ಸೌಕರ್ಯವನ್ನು ಮಾಡಿ ಕೊಟ್ಟಂದಿನಿಂದ ಆ ಬಂದರಗಳು ಅಭಿವೃದ್ಧಿಯನ್ನು ಹೊಂದುತ್ತಲಿವೆ. ದ್ವಾರಿಕೆಯಿಂದ ಎಣ್ಣೆ, ತುಪ್ಪ, ಪೋರಬಂದರದಿಂದ ಸುಣ್ಣದ ಕಲ್ಲು, ಸಿಮೆಂಟಗಳು ರಫ್ತಾಗುತ್ತವೆ. **ಖಾರಾಘೋಡಾ** ಎಂಬುದು



ಆಕೃತಿ ೬೨ ಗುಜರಾಥದ ಹಳ್ಳಿಯು

ಉಪ್ಪಿನ ಸಲುವಾಗಿ ಪ್ರಸಿದ್ಧವಾಗಿರುತ್ತದೆ. ಭಾವನಗರದಲ್ಲಿ ಬಟ್ಟೆಯ ಗಿರಣಿಗಳಿರುತ್ತವೆ. ಸೋರಟೀ, **ಸೋಮನಾಥ,** ದ್ವಾರಕಾ ಮತ್ತು **ಗಿರನಾರ** ಇವು ಕ್ಷೇತ್ರಗಳೆಂದು ಪ್ರಸಿದ್ಧವಾಗಿರುತ್ತವೆ. **ಕಾಂಡಲಾ** ಎಂಬ ಬಂದರವನ್ನು ಇತ್ತಲಾಗಿ ಬೆಳೆಯಿಸಿ ಒಳನಾಡಿಗೆ ಅದನ್ನು ರೇಲಿನಿಂದ ಜೋಡಿಸಿದ್ದಾರೆ.

ಗುಜರಾಥ ಮತ್ತು ಕಾಠೇವಾಡಗಳಲ್ಲಿ ಬಹಳ ಸಾಮ್ಯವಿರುತ್ತದೆ. ಈ ಎರಡೂ ಭಾಗಗಳಲ್ಲಿಯ ಜನರ ಭಾಷೆಯು ಗುಜರಾಥೀ ಇರುತ್ತದೆ. ಎರಡೂ ಪ್ರಾಂತಗಳ ಭೂಮಿಯು ಫಲವತ್ತಾಗಿರುತ್ತದೆ. ತಾಪೀ, ನರ್ಮದಾ, ಸಾಬರಮತೀ, ಮಹಾನದಿಗಳಿಂದ ತರಲ್ಪಟ್ಟ ರೇವೆಯಿಂದ ಗುಜರಾಥದೊಳಗಿನ ಭೂಮಿಯು ಉಂಟಾಗಿರುತ್ತದೆ. ಸಮುದ್ರ ದಂಡೆಯ ಹತ್ತರ ಇರುವ

ದಕ್ಷಿಣಭಾಗವನ್ನು ಬಿಟ್ಟರೆ, ಉಳಿದ ಭಾಗದಲ್ಲಿ ಸುಮಾರು ೩೦ ಇಂಚು ಮಳೆಯಾಗುತ್ತದೆ. ಸುರತದ ಕಡೆಗೆ ಮಾತ್ರ ೪೫ ಇಂಚಿನವರೆಗೆ ಮಳೆಯಾಗುತ್ತದೆ. ಉಷ್ಣತಾಮಾನವು ಹೆಚ್ಚಾಗಿದ್ದು ಉತ್ತರ, ಮಧ್ಯಮತ್ತು ಪೂರ್ವ ಗುಜರಾಥದಲ್ಲಿ ಅದು ಸಾಕಷ್ಟು ಹೆಚ್ಚಾಗುತ್ತದೆ. ಜೂನ್ ತಿಂಗಳಿನಿಂದ ನಾಲ್ಕು ತಿಂಗಳು ಮಳೆಯಾಗುತ್ತದೆ. ಉಳಿದ ಎಂಟು ತಿಂಗಳು ಒಣದಾಗಿರುತ್ತದೆ.

ಅತ್ಯುತ್ತಮವಾದ ಎರೆಮಣ್ಣು ಮತ್ತು ಸರ್ವಸಾಧಾರಣ ಮಳೆ ಇರುವದರಿಂದ ಗುಜರಾಥದ ಒಕ್ಕಲಿಗನು ಮುಖ್ಯವಾಗಿ ಹತ್ತಿಯನ್ನು ಬೆಳೆಯುತ್ತಾನೆ. ಮಳೆಗಾಲವು ಆರಂಭವಾದ ಕೂಡಲೇ ಹತ್ತಿಯನ್ನು ಬಿತ್ತಹತ್ತುತ್ತಾರೆ. ಫೇಬ್ರುವರೀ-ಮಾರ್ಚ್ ತಿಂಗಳಿನಲ್ಲಿ ಹತ್ತೀ ಬಿಡಿಸಹತ್ತುತ್ತಾರೆ. ನವಸಾರೀ, ಭಡೋಚ ಮುಂತಾದ ಭಾಗಗಳಲ್ಲಿ ಬೆಳೆಯುವ ಉದ್ದ ಎಳೆಯ ಹತ್ತಿಗೆ ಬೇಡಿಕೆಯು ಬಹಳ ಇರುತ್ತದೆ. ಈ ಪ್ರಾಂತದೊಳಗಿನ ಭೂಮಿಯು ಗೋದಿಗೆ ಯೋಗ್ಯವಾಗಿರುತ್ತದೆ. ಇದಲ್ಲದೆ ಮಳೆಯ ಪ್ರಮಾಣವು ಕಡಿಮೆ ಇದ್ದಲ್ಲಿ ಜೋಳ, ಸಜ್ಜೆ, ಕುಸುಬೆ ಮುಂತಾದ ಧಾನ್ಯಗಳನ್ನು ಬೆಳೆಯುತ್ತಾರೆ. ಸುರತದ ಹತ್ತರ ಮಳೆಯು ಹೆಚ್ಚಾಗುವದರಿಂದ ಅಲ್ಲಿ ಕಬ್ಬು, ಭತ್ತಗಳು ಬೆಳೆಯುತ್ತವೆ. ತೀರ ಬಡನೆಲದಲ್ಲಿ ನೆಲಗಡಲೆಯನ್ನು ಬಿತ್ತುತ್ತಾರೆ. ಪೆಟಲಾದದ ಹತ್ತರ ತಂಬಾಕು ಬೆಳೆಯುತ್ತದೆ. ಕಡಲೆ, ತೊಗರಿ, ಮುಂತಾದ ಕಡಧಾನ್ಯಗಳು ಎಲ್ಲ ಕಡೆಯಲ್ಲಿಯೂ ಬೆಳೆಯುತ್ತವೆ. ಕಾಯಿಪಲ್ಯೆಗಳ ಸಲುವಾಗಿಯಂತೂ ಗುಜರಾಥವು ಪ್ರಸಿದ್ಧವಾಗಿರುತ್ತದೆ. ಸಮುದ್ರದಂಡೆಯ ಭೂಮಿಯು ಹೆಚ್ಚಾಗಿ ಬೆಳೆಯುಳ್ಳದ್ದಿರುತ್ತದೆ.

ಗುಜರಾಥೀ ಒಕ್ಕಲಿಗನು ಮಹಾರಾಷ್ಟ್ರದ ಒಕ್ಕಲಿಗನಿಗಿಂತ ಹೆಚ್ಚು ಒಳ್ಳೇ ಸ್ಥಿತಿಯಲ್ಲಿರುತ್ತಾನೆ. ಭೂಮಿಯ ಮತ್ತು ದನಗಳ ಆರೈಕೆಯನ್ನು ಮಾಡುವದರಲ್ಲಿ ಅವನು ಬಹಳ ಜಾಗ್ರತೆಯುಳ್ಳವನಾಗಿರುತ್ತಾನೆ. ಇಲ್ಲಿಯ ಎಮ್ಮೆ ಆಕಳುಗಳು ಮೇಲಾದ ಜಾತಿಯವಿದ್ದು ವಿಪುಲವಾಗಿ ಹಾಲು ಕೊಡುತ್ತವೆ. ಗುಜರಾಥೀ ಜನರ ಊಟದೊಳಗೆ ಬೇಳೆ, ಗೋದಿಯ ರೊಟ್ಟಿ, ಹಾಲು, ತುಪ್ಪ ಮುಂತಾದ ಪದಾರ್ಥಗಳು ಸಾಕಷ್ಟು ಇರುತ್ತವೆ. ಇವರು ಶಾಕಾಹಾರಿಗಳು. ಸುರತದ ಪೂರ್ವಭಾಗದಲ್ಲಿಯೂ ಸಾತಪುಡಾ ಪರ್ವತದ ಮೇಲೆಯೂ ಹಳವುಗಳಿರುತ್ತವೆ. ಇಲ್ಲಿ ತೇಗು, ಬಿದರು, ಖೈರ ಮುಂತಾದ ಗಿಡಗಳು ಹೇರಳವಾಗಿ

ಬೆಳೆಯುತ್ತವೆ. ಹೊಳೆಗಳ ದಂಡೆಗುಂಟ ಜಾಲಿಯ ದೊಡ್ಡ ದೊಡ್ಡ ಅರಣ್ಯಗಳಿರುತ್ತವೆ.

ಈ ಪ್ರಾಂತದ ಮುಖ್ಯವಾದ ಉದ್ಯೋಗವು ಒಕ್ಕಲತನವಾಗಿದ್ದರೂ **ಅಹಮದಾಬಾದ**ದೊಳಗೆ ಎಷ್ಟೋ ಬಟ್ಟೆಯ ಗಿರಣಿಗಳು ಇರುತ್ತವೆ. ಮುಂಬಯಿಯ ತರುವಾಯ ಅಹಮದಾಬಾದವೇ ಬಟ್ಟೆಯ ಗಿರಣಿಗಳ ಸಲುವಾಗಿ ಪ್ರಸಿದ್ಧವಿರುತ್ತದೆ. **ಭಡೋಚ** ಮತ್ತು **ಖಂಬಾಯತ**ಗಳಲ್ಲಿ ಅರಳಿ, ಬಟ್ಟೆಗಳ ವ್ಯಾಪಾರವು ಹೆಚ್ಚಾಗಿ ನಡೆಯುತ್ತದೆ. **ಸುರತ**ದಲ್ಲಿ ಜರತಾರೀ ಕೆಲಸ, ರೇಶಿಮೆ, ಗಂಧದ ಕಟ್ಟಿಗೆ-ಹಸ್ತೀ ದಂತಗಳ ಮೇಲಿನ ಕೆತ್ತಿಗೆಯ ಕೆಲಸವು ಚನ್ನಾಗಿ ನಡೆಯುತ್ತವೆ. ಗುಜರಾಥೀ ಜನರು ವ್ಯಾಪಾರದೊಳಗೆ ಮುಂದುವರಿದಿರುತ್ತಾರೆ. ಅಲ್ಲಿ ಕೈಮಗ್ಗಗಳ ಮೇಲೆ ಖಾದಿಯನ್ನು ನೇಯುವ ಉದ್ಯೋಗವು ದೊಡ್ಡ ಪ್ರಮಾಣದಿಂದ ಸಾಗುತ್ತದೆ.

## ಪ್ರಶ್ನೆಗಳು

೧. ಕಾಠೇವಾಡದ ಹವಾಮಾನವನ್ನು ಹೇಳಿರಿ.
೨. ಗುಜರಾಥದೊಳಗಿನ ಹುಟ್ಟುವಳಿಗಳನ್ನು ಹೇಳಿರಿ.
೩. ಅಹಮ್ಮದಾಬಾದ, ಪೋರಬಂದರ, ದ್ವಾರಕಾ, ಸುರತ ಮತ್ತು ಭೂಜ ಇವು ಯಾತರ ಸಲುವಾಗಿ ಪ್ರಸಿದ್ಧ ಅವೆ ?
೪. ಹಿಂದೂಸ್ಥಾನದಲ್ಲಿ ಸಿಂಹಗಳು ಎಲ್ಲಿ ಸಿಗುತ್ತವೆ ?
೫. ಗುಜರಾಥೀ ಒಕ್ಕಲಿಗನ ಜೀವನವನ್ನು ವರ್ಣಿಸಿರಿ.

ಪಾಠ ೨೬

# ಉತ್ತರ ಪ್ರದೇಶ ತುಂದ್ರಾ

ಇಲ್ಲಿಯ ವರೆಗೆ ನಾವು ಹಿಂದೂಸ್ಥಾನದ ಅಭ್ಯಾಸವನ್ನು ಮಾಡಿದೆವು. ಹಿಂದೂಸ್ಥಾನ ದೇಶವು ಉಷ್ಣಕಟಿಬಂಧದೊಳಗಿದ್ದು, ಮನ್ಸೂನ ಗಾಳಿಗಳು ಇಲ್ಲಿ ಬೀಸುತ್ತಿರುತ್ತವೆ. ಇದರಿಂದ ಈ ದೇಶದ ಹವಾಮಾನವು ಒಂದು ವಿಶಿಷ್ಟವಾದ ರೀತಿಯಲ್ಲಿರುತ್ತದೆ. ಆದರೆ ಜಗತ್ತಿನೊಳಗಿನ ಬೇರೆ ಬೇರೆ ದೇಶ

ಗಳು ವಿಷುವ ವೃತ್ತದಿಂದ ಧ್ರುವ ಪ್ರದೇಶಗಳ ವರೆಗೆ ಹಬ್ಬಿರುವದರಿಂದ ಆಯಾ ದೇಶಗಳ ಹವಾಮಾನಗಳಲ್ಲಿ ಭಿನ್ನತೆ ಇರುವದು. ಹವಾಮಾನದೊಳಗಿರುವ ಈ ಹೆಚ್ಚು ಕಡಿಮೆಯಿಂದ ಅಲ್ಲಿ ಬೆಳೆಯುವ ವನಸ್ಪತಿಗಳ ಮೇಲೆಯೂ, ಜನ ಜೀವನದ ಮೇಲೆಯೂ ಪರಿಣಾಮವಾದದ್ದು ಕಂಡುಬರುತ್ತದೆ. ಮೊಟ್ಟ ಮೊದಲು ನಾವು ಧ್ರುವ ಪ್ರದೇಶದಲ್ಲಿ ವಾಸಿಸುವ ಜನರ ಬಗ್ಗೆ ವಿಚಾರ ಮಾಡುವಾ.

ಏಶಿಯಾ ಖಂಡದ ಉತ್ತರಕ್ಕಿರುವ ಬೈಲುಪ್ರದೇಶಕ್ಕೆ ಸೈಬೇರಿಯಾದ ಬೈಲೆನ್ನುತ್ತಾರೆ. ಈ ಬೈಲು ದಕ್ಷಿಣದಿಂದ ಉತ್ತರದ ಕಡೆಗೆ ಕ್ರಮೇಣ ಇಳುಕಲಾಗುತ್ತ ಹೋಗಿರುತ್ತದೆ. ಈ ಬೈಲಿನ ಉತ್ತರದ ಅಂಚಿಗೆ ತುಂದ್ರಾ ಎಂಬ ಹೆಸರಿರುತ್ತದೆ. ಅಲ್ಲಿ ಸಮಾಯಿಡ ಎಂಬ ಕುಲದ ಜನರು ವಾಸಿಸುತ್ತಾರೆ. ಅಮೇರಿಕದ ಉತ್ತರದಲ್ಲಿಯೂ ಸಹ ಇಂಥದೊಂದು ಪಟ್ಟಿಯು ಇರುತ್ತದೆ. ಅದಕ್ಕೆ 'ಬರನ್' ಅಂದರೆ ಬಂಜೆ ಎಂಬ ಹೆಸರು ಇರುತ್ತದೆ.

ಸಮಾಯಿಡ ಜನರು ಯಾವಾಗಲೂ ಡೇರೆಗಳಲ್ಲಿ ವಾಸಿಸುತ್ತಾರೆ. ಕೋಲುಗಳ ಚೌಕಟ್ಟಿನ ಮೇಲೆ ರೇನಡಿಯರ ಎಂಬ ಪ್ರಾಣಿಯ ಮೈದೊಗಲನ್ನು ಹೊಲಿದು ಈ ಡೇರೆಗಳನ್ನು ತಯಾರು ಮಾಡುತ್ತಾರೆ. ಚಳಿಯಿಂದ ಕಾಪಾಡಿಕೊಳ್ಳಲಿಕ್ಕೆ ಕೂದಲುಳ್ಳ ಬದಿಯನ್ನು ಒಳಬದಿಗೆ ಮಾಡಿರುತ್ತಾರೆ. ಅಡಿಗೆ ಮಾಡುವಾಗ ಹೊಗೆಯಾಗಬಾರದೆಂದು ಈ ಡೇರೆಗಳ ಮೇಲ್ಭಾಗದಲ್ಲಿ ತುಸು ಸ್ಥಳವನ್ನು ಬಿಟ್ಟಿರುತ್ತಾರೆ. ಬಾಗಿಲಿಗೆ ಇಳಿಬಿಟ್ಟ ತೊಗಲಿನ ಪರದೆಯನ್ನು ಓರೆಮಾಡಿ ಒಳಗೆ ಹೋಗಲು, ಹೊರಗಿನ ಚಳಿಯಿಂದಾಗುವ ಕಷ್ಟವನ್ನು ನಿವಾರಿಸಲಿಕ್ಕೆ ಬರುತ್ತದೆ. ನೆಲದ ಮೇಲೆ ತೊಗಲು ಹಾಸಿ ಅದರ ಮೇಲೆ ಒಣಗಿದ ಹಾವಸೆಯನ್ನು ಹರಡಿರುತ್ತಾರೆ. ಅದರ ಮೇಲೆ ಪುನಃ ಮೂರು ನಾಲ್ಕು ತೊಗಲುಗಳನ್ನು ಹಾಸಿದರೆ ತೀರಿತು. ಅವರ ಹಾಸಿಗೆಯು ಸಿದ್ಧವಾಯಿತು. ರೇನಡಿಯರದ ಕೋಡುಗಳನ್ನು ಅವರು ಗೂಟಗಳಂತೆ ಉಪಯೋಗಿಸುತ್ತಾರೆ. ಕಟ್ಟಿಗೆಯಿಂದ ಮಾಡಿದ ಪಾತ್ರೆಯೊಳಗೆ ಸೀಲ ಎಂಬ ಮೀನಿನ ಎಣ್ಣೆಯನ್ನು ಹಾಕಿ ಅದರೊಳಗೆ ಹಾವಸೆಯಿಂದ ಹೊಸೆದ ಬತ್ತಿಯನ್ನಿಟ್ಟು ದೀಪ ಹಚ್ಚುತ್ತಾರೆ. ಮತ್ತು ಅದರ ಮೇಲೆ ಅವರು ಬೇರೆ ಪಾತ್ರೆಯೊಳಗೆ ಮಾಂಸವನ್ನು ಬೇಯಿಸುತ್ತಾರೆ. ಊಟಮಾಡುವ ಪಾತ್ರೆಗಳನ್ನೆಲ್ಲ ಅವರು ಕಟ್ಟಿಗೆಯಿಂದಲೇ ಮಾಡಿರುತ್ತಾರೆ.

ತುಂದ್ರಾ ಪ್ರದೇಶದೊಳಗೆ ಧಾನ್ಯ ಬೆಳೆಯುವದಿಲ್ಲ. ಯಾಕೆಂದರೆ ನೆಲವು ಯಾವಾಗಲೂ ಬರ್ಫದಿಂದ ಮುಚ್ಚಿರುತ್ತದೆ. ಬೇಸಿಗೆಯಲ್ಲಿ ಬರ್ಫವು ಕರಗಲು ನೆಲವೆಲ್ಲ ಜೌಳಾಗುತ್ತದೆ. ಮತ್ತು ಅಲ್ಲಿ ಹಾವಸೆ, ಅಂತರ ಗಂಗೆಯಂಥ ವನಸ್ಪತಿಗಳು ಬೆಳೆಯುತ್ತವೆ. ಆಗ ಅಲ್ಲಿ ಅಸಂಖ್ಯವಾದ ನೊಣ, ಗುಂಗಾಡು ಮುಂತಾದ ಹುಳಗಳು ಹುಟ್ಟುತ್ತವೆ. ಮತ್ತು ಅವುಗಳನ್ನು ತಿಂದು ಜೀವಿಸುವಂಥ ಪಕ್ಷಿಗಳು ಗುಂಪುಗುಂಪಾಗಿ ಬರುತ್ತವೆ. ತುಂದ್ರಾ ಪ್ರದೇಶದೊಳಗಿನ ಬೇಸಿಗೆಯು ಎರಡೇ ತಿಂಗಳು ಇರುತ್ತದೆ. ಉಳಿದ ವೇಳೆ ಯಲ್ಲೆಲ್ಲ ಚಳಿಗಾಲವೇ ಇರುತ್ತದೆ. ಮೇ ಮತ್ತು ಜೂನ ತಿಂಗಳುಗಳಲ್ಲಿ ಇಲ್ಲಿ ಸೂರ್ಯನು ಮುಳುಗುವದೇ ಇಲ್ಲ. ಆಗ ಅಲ್ಲಿ ಹವೆಯಲ್ಲಿ ಆರ್ದ್ರತೆಯು ಹೆಚ್ಚಾಗಿದ್ದು, ಯಾವಾಗಲೂ ದಟ್ಟವಾದ ಮಂಜು ತುಂಬಿರುತ್ತದೆ. ಇದೇ ವೇಳೆಯಲ್ಲಿ ಅಲ್ಲಿ ತುಸು ಮಳೆಯಾಗುತ್ತದೆ. ಇಡೀ ವರುಷದಲ್ಲೆಲ್ಲ ಕೂಡಿ ಹತ್ತು ಇಂಚಿನಷ್ಟು ಮಳೆಯಾಗುತ್ತದೆ. ಜುಲೈ, ಆಗಸ್ಟ ತಿಂಗಳುಗಳಲ್ಲಿಯೂ ಬೇಸಿಗೆಯೇ ಇರುತ್ತದೆ. ಆ ಬಳಿಕ ಉತ್ತರ ದಿಕ್ಕಿನಿಂದ ತಂಪಾದ ಗಾಳಿಗಳು ಬೀಸಹತ್ತಿದವೆಂದರೆ ಪಕ್ಷಿಗಳೆಲ್ಲ ಈ ಪ್ರದೇಶವನ್ನು ಬಿಟ್ಟು ದಕ್ಷಿಣದ ಕಡೆಗೆ ಹೊರಟುಹೋಗುತ್ತವೆ. ಉಷ್ಣತೆಯು ಕಡಿಮೆಯಾಗುತ್ತ ಹೋಗಿ, ಬಿರು ಗಾಳಿಗಳು ಬೀಸಲಾರಂಭಿಸುತ್ತವೆ. ಸಪ್ಟೆಂಬರ ೧೫ ರ ವರೆಗೆ ಎಲ್ಲ ಪ್ರದೇಶ ವೆಲ್ಲ ಬರ್ಫಮಯವಾಗಿ ಚಳಿಗಾಲವು ಆರಂಭವಾಗುತ್ತದೆ. ಚಳಿಗಾಲದಲ್ಲಿ ಹವೆಯು ಒಣದಾಗಿರುತ್ತದೆ.

ಬೇಸಿಗೆಯಲ್ಲಿ ಬರ್ಫವು ಕರಗಿ ನದಿಗಳು ತುಂಬಿ ಹರಿಯಲಾರಂಭಿಸಲು, ಮೀನಹಿಡಿಯುವ ಕೆಲಸವು ಆರಂಭವಾಗುತ್ತದೆ. ಆಗ ಇಲ್ಲಿಯ ಜನರು ಹೊಳೆಗಳ ದಂಡೆಯ ಮೇಲೆ ತಮ್ಮ ಡೇರೆಗಳನ್ನು ಹೊಡೆದು ಮೀನಹಿಡಿಯುವ ಉದ್ಯೋಗವನ್ನು ಮಾಡುವರು. ಮೀನವೇ ಅವರ ಮುಖ್ಯವಾದ ಆಹಾರವು. ಈ ಎರಡು ತಿಂಗಳುಗಳಲ್ಲಿ ಅವರು ಸಾಕಷ್ಟು ಮೀನಹಿಡಿದು ಅವುಗಳ ಸಂಗ್ರ ಹವನ್ನು ಮಾಡುವರು. ಸೀಲ, ಕಾಡ್, ಸಾಲ್ಮನ್, ಸ್ಟರ್ಜನ್ ಮುಂತಾದ ಎಷ್ಟೋ ಜಾತಿಯ ಮೀನಗಳು ಈ ಭಾಗದಲ್ಲಿ ಸಿಗುತ್ತವೆ.

ರೇನಡಿಯರ ಎಂಬ ಜಾತಿಯ ಚಿಗರಿಗಳ ಹಿಂಡುಗಳನ್ನು ಸಾಕುವದು ಇವರ ಎರಡನೇ ಉದ್ಯೋಗವಾಗಿರುತ್ತದೆ. ಹಾವಸೆಯೇ ಈ ಪ್ರಾಣಿಗಳ ಮುಖ್ಯ ವಾದ ಆಹಾರವಾಗಿರುವದರಿಂದ ಒಂದು ಕಡೆಯ ಹಾವಸೆಯು ತೀರಿತೆಂದರೆ ಈ

ಜನರು ತಮ್ಮ ರೇನಡಿಯರಗಳ ಹಿಂಡುಗಳನ್ನು ಕಟ್ಟಿಕೊಂಡು ಎರಡನೇ ಕಡೆಗೆ ಹೋಗುತ್ತಾರೆ. ಆದ್ದರಿಂದ ಇವರು ಒಂದೇ ಕಡೆಗೆ ಮನೆಮಾಡಿಕೊಂಡಿರುವದಿಲ್ಲ. ಇವರು ಅಡ್ಡಾಡಿಗರು. ಪ್ರತಿಯೊಂದು ಕುಟುಂಬದ ಹತ್ತರ ಸುಮಾರು ೫೦ ರೇನಡಿಯರಗಳ ಒಂದು ಹಿಂಡು ಇರುತ್ತದೆ. ಅದಕ್ಕೆ ಮೇಯುವದರ ಸಲುವಾಗಿ ಸುಮಾರು ನಾಲ್ಕು ಚೌರಸ ಮೈಲಿನಷ್ಟು ಸ್ಥಳವು ಬೇಕಾಗುತ್ತದೆ.



ಆಕೃತಿ ೬೩ ರೇನಡಿಯರದ ಗಾಲಿಗಳಿಲ್ಲದ ಜಾರುಬಂಡಿ (ಸ್ಲೆಜ್)

ಚಳಿಗಾಲದಲ್ಲಿ ಹೊಳೆಗಳೆಲ್ಲ ಹೆಪ್ಪುಗಟ್ಟಿದವೆಂದರೆ ಈ ಜನರು ಗಾಲಿಗಳಿಲ್ಲದ ಜಾರುಬಂಡಿ (ಸ್ಲೆಜ್ಜ) ಗಳಿಗೆ ರೇನಡಿಯರಗಳನ್ನು ಹೂಡಿ ಅದರೊಳಗಿಂದ ಅತ್ತಿತ್ತ ಪ್ರವಾಸ ಮಾಡುತ್ತಾರೆ. ಚಳಿಗಾಲದಲ್ಲಿ ಪ್ರವಾಸ ಮಾಡುವದು ಹೆಚ್ಚು ಸುಲಭವಾಗಿರುತ್ತದೆ. ಆದರೆ ಬೇಸಿಗೆಯಲ್ಲಿ ಜೌಳಿನೊಳಗಿಂದ ಪ್ರವಾಸ ಮಾಡುವದು ಬಹಳ ತೊಂದರೆಯುಳ್ಳದ್ದಾಗಿರುತ್ತದೆ. ಚಳಿಗಾಲದಲ್ಲಿ ಬಂಡಿಯನ್ನು ಎಳೆಯಲಿಕ್ಕೆ ಎರಡೇ ರೇನಡಿಯರಗಳು ಸಾಕಾಗುತ್ತವೆ. ಆದರೆ ಬೇಸಿಗೆಯಲ್ಲಿ ಐದು ಬೇಕಾಗುತ್ತವೆ. ರೇನಡಿಯರವು ಎಲ್ಲ ಬಗೆಯಿಂದಲೂ ಉಪಯೋಗವುಳ್ಳ ಪ್ರಾಣಿಯಾಗಿರುತ್ತದೆ. ಅದು ಹಾಲು ಕೊಡುತ್ತದೆ.

ಅದರ ಮಾಂಸವು ತಿನ್ನಲಿಕ್ಕೆ ಬರುತ್ತದೆ. ಅದರ ತೊಗಲಿನಿಂದ ಉಡುಪುಗಳನ್ನು ಮಾಡಿಕೊಳ್ಳುತ್ತಾರೆ. ಆದರ ಕರುಳಿನಿಂದಲೇ ಉಡುಪುಗಳನ್ನು ಹೊಲಿಯುತ್ತಾರೆ. ತುಂದ್ರಾದ ದಕ್ಷಿಣಕ್ಕೆ ಹಳವುಗಳ ಒಂದು ಪಟ್ಟಿ ಇರುತ್ತದೆ. ಚಳಿಗಾಲದಲ್ಲಿ ಇಲ್ಲಿಯ ಜನರು ಅಲ್ಲಿ ಹೋಗುತ್ತಾರೆ. ಮತ್ತು ಆಲ್ಲಿ ಸಿಗ್ಗುಷ್ಟ ಬಿಳೀ ಕರಡಿ, ಸೀಲ ಎಂಬ ಜಾತಿಯ ಮೀನಗಳ ಬೇಟೆಯಾಡುತ್ತಾರೆ.



ಆಕೃತಿ ೬೪ ಎಸ್ಕಿಮೋನ ಮನೆ

ವೇಳೆ ಸಿಕ್ಕಾಗ ಗಂಡಸರು ಮೀನಿನ ಎಲುವಿನಿಂದ ಬರ್ಚಿ, ಬಾಣ, ಬಿಲ್ಲುಗಳನ್ನು ಮಾಡುತ್ತಾರೆ. ಡೇರೆಗಳನ್ನು ದುರಸ್ತ ಮಾಡುವದು, ರೇನಡಿಯರಗಳನ್ನು ಹಿಂಡುವದು, ಡೇರೆಗಳನ್ನು ನಿಲ್ಲಿಸುವದು ಮುಂತಾದ ಕೆಲಸಗಳನ್ನು ಹೆಂಗಸರು ಮಾಡುತ್ತಾರೆ.

ರೇನಡಿಯರವು ಚಿಗರಿಯ ವರ್ಗದೊಳಗಿನ ಪ್ರಾಣಿಯಾಗಿರುತ್ತದೆ. ಇದರ ಕೊಳಗಗಳು ಗಟ್ಟಿಯಾಗಿಯೂ, ಅಗಲವಾಗಿಯೂ ಇರುವದರಿಂದ ಆದು ಬರ್ಫದ ಮೇಲಿನಿಂದಲೂ, ಜಾಳುಗಳೊಳಗಿಂದಲೂ ತೀವ್ರವಾಗಿ ಹೋಗಬಲ್ಲದು; ಮತ್ತು ಬರ್ಫವನ್ನು ಒಡೆದು ಅದರ ಕೆಳಗಿರುವ ಹಾವಸೆಯನ್ನು ತಿನ್ನಲಿಕ್ಕೆ ಬರುತ್ತದೆ. ಒಟ್ಟಿನ ಮೇಲೆ ಇಲ್ಲಿಯ ಜನಜೀವನವು ಬಹು

ಕಷ್ಟದಾಯಕವಾಗಿರುತ್ತದೆ. ರೇನಡಿಯರಡ ಹಿಂಡುಗಳೇ ಇಲ್ಲಿಯ ಜನರ ಸಂಪತ್ತು. ಮೀನು ಮತ್ತು ಮಾಂಸಗಳ ಹೊರತಾಗಿ ಬೇರೆ ಆಹಾರವೇ ಇರುವದಿಲ್ಲ. ಚಳಿಗಾಲದಲ್ಲಿ ಒಮ್ಮೊಮ್ಮೆ ಇವು ಸಹ ಸಾಕಷ್ಟು ಸಿಗುವದಿಲ್ಲ. ಇಂಥ ಬರಗಾಲದಲ್ಲಿ ಕೇವಲ ಎಲುಬುಗಳನ್ನು ಕಚ್ಚಿ ದಿವಸಗಳನ್ನು ಕಳೆಯ ಬೇಕಾಗುತ್ತದೆ. ಇಲ್ಲಿಯ ಚಳಿಗೆ ಅವರು ಅಂಜುವದಿಲ್ಲ. ಆದರೆ ಅನ್ನದ ಸಲುವಾಗಿ ಮಾತ್ರ ಅವರು ಯಾವಾಗಲೂ ಚಿಂತೆಯಲ್ಲಿರುತ್ತಾರೆ. ಅವರು ಗಟ್ಟಿಗರಿರುತ್ತಾರೆ. ಅವರ ಜೀವನವು ಇಷ್ಟು ಕಷ್ಟಮಯವಾಗಿದ್ದರೂ ಅವರು ಯಾವಾಗಲೂ ಆನಂದದಲ್ಲಿರುತ್ತಾರೆ.

ಇತ್ತಲಾಗಿ ರಸಿಯನ್ ಸರಕಾರದವರು ಈ ಪ್ರದೇಶದ ಮತ್ತು ಅಲ್ಲಿಯ ಜನರ ಏಳಿಗೆಗಾಗಿ ಪ್ರಯತ್ನ ಮಾಡುತ್ತಲಿದ್ದಾರೆ. ಇಲ್ಲಿಯ ಭೌಗೋಲಿಕ ಪರಿಸ್ಥಿತಿಯನ್ನೂ, ಹವಾಮಾನವನ್ನೂ ಕಂಡುಹಿಡಿಯಲಿಕ್ಕೆ ಅಲ್ಲಲ್ಲಿ ಕೇಂದ್ರಗಳ ಏರ್ಪಾಡು ಮಾಡಿದ್ದಾರೆ. ಅದರಂತೆ ಹೊಳೆಗಳ ಮುಖಗಳ ಹತ್ತರ ಬಂದರ ಗಳನ್ನು ಕಟ್ಟಿ, ಜನರ ವಸಾಹತುಗಳನ್ನು ಸ್ಥಾಪಿಸಲಿಕ್ಕೆ ಆರಂಭಮಾಡಿದ್ದಾರೆ. ದಕ್ಷಿಣದಲ್ಲಿರುವ ಹಳವುಗಳೊಳಗಿನ ಕಟ್ಟಿಗೆಯನ್ನು ಕಡಿದು ಅವುಗಳನ್ನು ಹೊಳೆಗಳ ಪ್ರವಾಹದ ಗುಂಟ ಮುಖದ ವರೆಗೆ ತರುತ್ತಾರೆ. ಮತ್ತು ಬಂದರ ಗಳಲ್ಲಿ ಅವುಗಳನ್ನು ಕೊರೆದು, ಹಲಗೆಗಳನ್ನು ಮಾಡಿ ಪರದೇಶಗಳಿಗೆ ಕಳಿಸು ತ್ತಾರೆ. ಆಬ ಹೊಳೆಯ ಮುಖದ ಹತ್ತರ ಇರುವ **ಇಂಗಾರಾ** ಎಂಬ ಬಂದ ರವು ಎಲ್ಲಕ್ಕೂ ದೊಡ್ಡದಾಗಿರುತ್ತದೆ. ಸೂರ್ಯಪ್ರಕಾಶವಿಲ್ಲದಾಗ ಎಲ್ಲ ಕೆಲಸ ಗಳು ವಿದ್ಯುದ್ದೀಪಗಳ ಮೇಲೆಯೇ ನಡೆಯುತ್ತವೆ. ಇಲ್ಲಿಯ ಜನಸಂಖ್ಯೆಯು ೧೫೦೦೦ ಇರುತ್ತದೆ. ಜನತೆಯಲ್ಲಿ ಶಿಕ್ಷಣವು ಹಬ್ಬುತಿದ್ದರೂ ಅವರ ಅಡ್ಡಾ ಡುವ ಜೀವನವು ಮಾತ್ರ ಹಾಗೇ ಇರುತ್ತದೆ. ಈ ಭಾಗದೊಳಗಿನ ಜನ ವಸತಿಯು ತೀರ ವಿರಲವಾಗಿರುತ್ತದೆ. ಇದೇ ಪ್ರಕಾರದ ಜೀವನವನ್ನು ಕಳೆಯುತ್ತಿರುವಂಥ ಜನರು ಅಮೇರಿಕೆಯೊಳಗಿನ ಕಾನಡಾದೇಶದ ಉತ್ತರದ ಅಂಚಿನಲ್ಲಿ ವಾಸಿಸುತ್ತಾರೆ. ಅವರಿಗೆ 'ಎಸ್ಕಿಮೋ' ಎಂದೆನ್ನುತ್ತಾರೆ. ಅಲ್ಲಿ 'ಪೋಲರ್‌ಡಾಗ್' ಎಂಬ ಜಾತಿಯ ನಾಯಿಗಳು ಬಹಳ.

## ಪ್ರಶ್ನೆಗಳು

೧. ತುಂಡ್ರಾ ಪ್ರದೇಶವು ಯಾವ ಭಾಗದಲ್ಲಿರುತ್ತದೆ? ಇಲ್ಲಿಯ ಜನರಿಗೆ ಏನೆಂದೆನ್ನು ತ್ತಾರೆ? ಇದೇ ಪ್ರಕಾರದ ಪ್ರದೇಶವು ಮತ್ತೆಲ್ಲಿ ಕಂಡುಬರುತ್ತದೆ?

೨. ತುಂದ್ರಾ ಪ್ರದೇಶದ ಹವಾಮಾನವನ್ನು ವರ್ಣಿಸಿರಿ.
೩. ಸಮಾಯಿಡ ಜನರ ಜೀವನವನ್ನು ವರ್ಣಿಸಿರಿ.
೪. ಈ ಜನರ ಮುಖ್ಯ ಸಂಪತ್ತು ಯಾವದು ? ಅದರ ಉಪಯೋಗವನ್ನು ಅವರು ಹೇಗೆ ಮಾಡಿಕೊಳ್ಳುತ್ತಾರೆ.
೫. ಈ ಜನರ ಸುಧಾರಣೆಯ ಬಗ್ಗೆ ಯಾರು ಪ್ರಯತ್ನಿಸುತ್ತಿದ್ದಾರೆ? ಅವರ ಪ್ರಯತ್ನಗಳು ಯಾವವು ?
೬. ತುಂದ್ರಾ ಪ್ರದೇಶದೊಳಗಿನ ಬೇಸಿಗೆಯೊಳಗಿನ ಪರಿಸ್ಥಿತಿಯನ್ನು ವರ್ಣಿಸಿರಿ.

ಪಾಠ ೨೭

# ವಿಷುವ ವೃತ್ತದ ಹತ್ತರದ ಪ್ರದೇಶವು

ಧ್ರುವ ಪ್ರದೇಶದೊಳಗಿನ ಅತಿ ತಂಪು ಹವೆಯಲ್ಲಿ ವಾಸಿಸುವ ಜನ ಜೀವನದ ಬಗ್ಗೆ ನಾವು ತಿಳಿದುಕೊಂಡೆವು. ಇನ್ನು ಇದಕ್ಕೆ ತೀರ ವಿಪರೀತವಾಗಿರುವ ವಿಷುವ ವೃತ್ತದ ಹತ್ತರಿರುವ ಪ್ರದೇಶದೊಳಗೆ ವಾಸಿಸುವಂಥ ಜನರ ಕಡೆಗೆ ಹೋಗುವಾ. ನಮ್ಮ ಏಶಿಯಾ ಖಂಡದೊಳಗಿನ ಮಲಾಯಾ ಎಂಬ ದ್ವೀಪಕಲ್ಪವೂ, ಸಿಂಗಾಪೂರ ಎಂಬ ದ್ವೀಪವೂ ವಿಷುವ ವೃತ್ತದ ಹತ್ತರವೇ ಇರುತ್ತವೆ.

ಇತ್ತಲಾಗಿ ಈ ದೇಶದೊಳಗೆ ಯುರೋಪಿಯನ್ನರು, ಹಿಂದೀ ಮತ್ತು ಚೀನೀ ಜನರು ಪ್ರವೇಶಮಾಡಿದ್ದಾರೆ. ಈ ಭಾಗದಲ್ಲೆಲ್ಲ ದಟ್ಟಾದ ಅರಣ್ಯಗಳಿರುತ್ತವೆ. ಈ ಅರಣ್ಯಗಳನ್ನು ಕಡಿದು, ಅಲ್ಲಿ ರಬ್ಬರು, ಚಹಗಳ ತೋಟಗಳನ್ನು ಮಾಡಿದ್ದಾರೆ. ಆದರೂ ಬಹು ದೊಡ್ಡ ಭಾಗವು ಇನ್ನೂ ಹಳವುಗಳಿಂದ ತುಂಬಿಕೊಂಡಿದ್ದು, ಅಲ್ಲಿ ಗುಡ್ಡಗಾಡು ಜನರೇ ವಾಸಿಸುತ್ತಾರೆ. ಅವರಿಗೆ ಸೇಮಾಂಗ ಜಾತಿಯ ಜನರೆಂದೆನ್ನುತ್ತಾರೆ. ಅವರು ಗಿಡ್ಡರೂ, ಕರೇ ಬಣ್ಣದವರೂ, ಅಗಲಾದ ಮೂಗಿನವರೂ ಮತ್ತು ದಪ್ಪಾದ ತುಟಿಯುಳ್ಳವರೂ ಆಗಿರುತ್ತಾರೆ. ಮೈಕೈಗಳಿಂದ ಗಟ್ಟಿಗರಾಗಿರುತ್ತಾರೆ. ಅವರ ಕೂದಲುಗಳು ಉಂಗುರವಾಗಿದ್ದು ಗಂಡಸರಿಗೆ ಗಡ್ಡಮೀಸೆಗಳಿರುವದಿಲ್ಲ.

ಈ ಜನರು ಹೊಲ ಮನೆ ಮಾಡುವದಿಲ್ಲ. ದನಕರುಗಳನ್ನು ಸಾಕುವದಿಲ್ಲ. ಅರಣ್ಯದಲ್ಲಿ ಸಿಗುವ ಹಣ್ಣುಹಂಪಲುಗಳನ್ನು ತಿಂದು ಇವರು ಜೀವಿಸುತ್ತಾರೆ. ಈ ಪ್ರದೇಶದೊಳಗೆ ಹನ್ನೆರಡೂ ತಿಂಗಳು ಮಳೆ ಬೀಳು

ತ್ತಿರುತ್ತದೆ. ಹವೆಯು ಯಾವಾಗಲೂ ಉಷ್ಣವಾದದ್ದೂ, ಆರ್ದ್ರತೆಯುಳ್ಳದ್ದೂ ಇರುತ್ತದೆ. ಹಳವುಗಳಂತೂ ಅತಿ ದಟ್ಟಾಗಿ ಬೆಳೆದಿರುತ್ತವೆ. ಎಷ್ಟೋ ಗಿಡ ಬಳ್ಳಿಗಳು ನೆಲದ ಮೇಲೆ ಹತ್ತಿಯಾಗಿ ಬೆಳೆದಿರುವದರಿಂದ ಒಳಗೆ ಹೋಗಲು ಸಹ ಬರುವದಿಲ್ಲ. ಇಲ್ಲಿಯ ಗಿಡಗಳು ಎತ್ತರವಾಗಿ ಬೆಳೆಯುತ್ತವೆ. ಗಿಡಗಳು



ಆಕೃತಿ ೬೫ ವಿಷುವ ವೃತ್ತದ ಪ್ರದೇಶದೊಳಗಿನ ಹಳವು

ಬಹಳ ದಟ್ಟಾಗಿ ಬೆಳೆಯುವದರಿಂದ ಸೂರ್ಯನ ಪ್ರಕಾಶವು ಸಹ ಅವುಗಳಿಗೆ ಮುಟ್ಟುವದಿಲ್ಲ. ಸೂರ್ಯನ ಪ್ರಕಾಶವನ್ನು ದೊರಕಿಸುವದರ ಸಲುವಾಗಿ ಗಿಡಗಳು ಹೆಚ್ಚೆಚ್ಚು ಎತ್ತರ ಬೆಳೆಯುತ್ತ ಹೋಗುತ್ತವೆ. ಗಿಡಗಳ ಮೇಲೆ ನಾನಾತರದ ಬಳ್ಳಿಗಳು ಬೆಳೆದು ಅವುಗಳ ಜಾಳಿಗೆಯೇ ಉಂಟಾಗಿರುತ್ತದೆ. ಎತ್ತರವಾಗಿ ಬೆಳೆದ ಗಿಡಬಳ್ಳಿಗಳಿಂದ ಸೂರ್ಯಕಿರಣಗಳು ತಡೆಯಲ್ಪಡುವದರಿಂದ ನೆಲದ ಮೇಲೆ ಸೂರ್ಯದರ್ಶನವೇ ಆಗುವದಿಲ್ಲ. ಎಲ್ಲ ಪ್ರಕಾರದ ಗಿಡಗಳು ವಿಪುಲವಾಗಿ ಬೆಳೆದರೂ ಅವುಗಳಲ್ಲಿ ಇಂಥವೇ ಹೆಚ್ಚಾಗಿರುತ್ತವೆಂದು ಹೇಳಲಿಕ್ಕೆ ಬರುವದಿಲ್ಲ. ಎಲ್ಲ ಜಾತಿಯ ಗಿಡಗಳು ಕೂಡಿಯೇ ಬೆಳೆಯುತ್ತವೆ. ಧ್ರುವ ಪ್ರದೇಶದ ಹತ್ತರಿರುವ ಹಳವುಗಳಲ್ಲಿ ಒಂದೇ ಪ್ರಕಾರದ ಗಿಡ

ಗಳು ಎಷ್ಟೋ ಮೈಲುಗಳ ವರೆಗೆ ಒಂದೇ ಸವನೆ ಬೆಳೆಯುತ್ತವೆ. ಆದರೆ ಈ ವಿಷುವ ವೃತ್ತದ ಮೇಲಿನ ಅರಣ್ಯಗಳಲ್ಲಿ ಹಾಗೆ ಇರುವದಿಲ್ಲ. ಈ ಪ್ರದೇಶ ದೊಳಗಿನ ಉಷ್ಣ ಹವೆ ಮತ್ತು ಸಾಕಷ್ಟು ಮಳೆ ಇವುಗಳ ಮೇಲಿಂದ ಅಲ್ಲಿ ಧನಧಾನ್ಯಗಳು ಸಮೃದ್ಧಿಯಾಗಿರಬಹುದೆಂದು ಅನುಮಾನಿಸಬಹುದು. ಆದರೆ ಅದು ತೀರ ತಪ್ಪು. ಇಲ್ಲಿ ಕಾಣುವ ವನಸ್ಪತಿಗಳ ಸಮೃದ್ಧಿಯು ನೋಡುವದಕ್ಕೆ ಮಾತ್ರವಿರುತ್ತದೆ. ಇಲ್ಲಿಯ ಸೆಮಾಂಗ ಜನರಿಗೆ ಯಾವಾ ಗಲೂ ಅನ್ನದ ಕೊರತೆ ಇರುತ್ತದೆ. ಈ ಜನರಿಗೆ ಅರಣ್ಯಗಳನ್ನು ಕಡಿದು ಹೊಲ ಸಾಗುಮಾಡಲಿಕ್ಕೆ ಬರುವದಿಲ್ಲ. ಯಾಕಂದರೆ ಈ ಅರಣ್ಯಗಳನ್ನು ಕಡಿ ಯಲಿಕ್ಕೆ ಬೇಕಾಗುವ ಕೊಡಲಿ-ಖುರುಪಿಗಳಂಥ ಸಾಧನಗಳೇ ಇರುವದಿಲ್ಲ. ಒಂದು ವೇಳೆ ತುಸು ಗಿಡಗಳನ್ನು ಕಡಿದು ತೆಗೆದರೂ ಅಸಂಖ್ಯವಾದ ಎರಡನೇ ಗಿಡಗಳು ತೀವ್ರವಾಗಿ ಬೆಳೆಯುತ್ತವೆ. ಈ ಕಾರಣಗಳಿಂದ ಅಲ್ಲಿ ಒಕ್ಕಲತ ನವು ಅಸಾಧ್ಯವಾಗಿರುತ್ತದೆ. ಹಣ್ಣುಹಂಪಲಗಳನ್ನು ತಿಂದು ಅಲ್ಲಿಯ ಜನರು ಜೀವಿಸಬೇಕಾಗುತ್ತದೆ. ಆದರೆ ಗಿಡಗಳನ್ನು ಏರಿ ಹಣ್ಣುಹಂಪಲ ಗಳನ್ನು ತೆಗೆಯುವದೂ ಸಾಧ್ಯವಿರುವದಿಲ್ಲ. ಯಾಕಂದರೆ ಗಿಡಗಳ ಮೇಲೆ ಯಾವಾಗಲೂ ದೊಡ್ಡ ದೊಡ್ಡ ಹಾವುಗಳಿರುತ್ತವೆ. ಇದಲ್ಲದೇ ಎಷ್ಟೋ ತರದ ಗುಂಗಾಡು, ಹುಳ, ಓತಿಕಾಟ, ಮಂಗ ಮುಂತಾದ ಪ್ರಾಣಿಗಳಂತೂ ಗಿಡ ಗಳಲ್ಲಿ ತುಂಬಿರುತ್ತವೆ. ಆದ್ದರಿಂದ ಗಿಡದ ಮೇಲಿನ ಕಾಯಿಗಳು ಹಣ್ಣಾಗಿ ಕೆಳಗೆ ಬಿದ್ದ ಮೇಲೆಯೇ ಅವರಿಗೆ ಅವು ಸಿಗುವವು.

ಈ ಪ್ರದೇಶದೊಳಗೆ ಅನ್ನದ ಕೊರತೆ ಇರುವದರಿಂದ ಇಲ್ಲಿಯ ಜನ ಸಂಖ್ಯೆಯು ತೀರ ವಿರಲವಾಗಿರುತ್ತದೆ. ಇಪ್ಪತ್ತರಿಂದ ಮೂವತ್ತು ಜನರ ಒಂದೊಂದು ಗುಂಪುಗಳಿರುತ್ತವೆ. ಮುಂಜಾವಿನಿಂದ ಸಂಜೆಯ ವರೆಗೆ ಹೊಟ್ಟೆತುಂಬ ಆಹಾರ ಸಂಪಾದಿಸುವದೇ ಈ ಜನರ ಧ್ಯೇಯವಿರುತ್ತದೆ. ಇದರ ಸಲುವಾಗಿ ಅವರಿಗೆ ನಾಲ್ಕೈದು ಚೌರಸ ಮೈಲುಗಳ ವರೆಗೆ ಪ್ರತಿ ದಿವಸ ಓಡಾಡಬೇಕಾಗುತ್ತದೆ. ಅಡವಿಯೊಳಗೆ ತಿರುಗಾಡುವದು ಕೂಡ ಗಂಡಾಂತರದ್ದಿರುತ್ತದೆ. ಅವರಿಗೆ ಹುಲಿ, ಚಿರ್ಚು, ಆನೆ ಮುಂತಾದ ಹಿಂಸ್ರ ಪ್ರಾಣಿಗಳಿಂದ ತಮ್ಮನ್ನು ಸಂರಕ್ಷಣ ಮಾಡಿಕೊಳ್ಳಬೇಕಾಗುತ್ತದೆ. ಈ ಪ್ರಾಣಿಗಳ ಬೇಟೆಯಾಡುವದು ಸಾಧ್ಯವಿರುವದಿಲ್ಲ. ಯಾಕಂದರೆ ಇವರ ಹತ್ತರ ಧನುಷ್ಯ-ಬಾಣಗಳ ಹೊರ್ತಾಗಿ ಬೇರೆ ಆಯುಧಗಳೇ ಇರುವದಿಲ್ಲ.

ಬಾಣಗಳ ತುದಿಗೆ ಒಂದು ಪ್ರಕಾರದ ವನಸ್ಪತಿಯಿಂದ ಸಿಗುವ ವಿಷವನ್ನು ಹಚ್ಚುವರು. ಪಕ್ಷಿ, ಓತಿಕಾಟ, ಇಣಚಿ, ಮಂಗ ಮುಂತಾದ ಪ್ರಾಣಿಗಳ ಬೇಟೆಯಾಡುತ್ತಾರೆ. ಅವರು ಹೊಳೆಗಳಲ್ಲಿ ಮೀನಗಳನ್ನು ಹಿಡಿಯುತ್ತಾರೆ. ಮೀನ ಮತ್ತು ಹಣ್ಣುಹಂಪಲಗಳೇ ಇಲ್ಲಿಯ ಜನರ ಮುಖ್ಯ ಆಹಾರಗಳಾ



ಆಕೃತಿ ೬೬ ಆಫ್ರಿಕೆಯ ದಟ್ಟಡವಿಯೊಳಗಿನ ಒಂದು ಹಳ್ಳಿಯು

ಗಿರುತ್ತವೆ. ನಮ್ಮ ದೇಶದಲ್ಲಿ ಸಿಗುವ ತೆಂಗಿನ ಕಾಯಿಯಂಥ 'ಡುರಿಯನ್' ಎಂಬ ಕಾಯಿಯ ಮೇಲೆ ಇಲ್ಲಿಯ ಜನರು ಮುಖ್ಯವಾಗಿ ಜೀವಿಸುತ್ತಾರೆ. ಇದಲ್ಲದೆ ಗೆಣಸು, ಗಡ್ಡೆ, ಬಿದಿರಿನ ಎಳೆಕೊಂಬು ಮುಂತಾದವುಗಳನ್ನು ಉಪಯೋಗಿಸುತ್ತಾರೆ.

ಎಲ್ಲಿಯಾದರೂ ತುಸು ಬೈಲು ಸ್ಥಳವಿದ್ದರೆ ಅಲ್ಲಿ ಅವರು ತಮ್ಮ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಗುಡಿಸಲುಗಳ ಸುತ್ತಲೂ ಬೇಲಿಯನ್ನು ಹಚ್ಚಿ ಹಿಂಸ್ರ ಪ್ರಾಣಿಗಳಿಂದ ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುತ್ತಾರೆ. ಗಡುತರವಾದ ಬಿದಿರಿನ ನಳಿಗಳಲ್ಲಿ ಆಹಾರವನ್ನು ಹಾಕಿ,

ಸಿಂಕಿಯು ಮೇಲೆ ಹಿಡಿಯುತ್ತಾರೆ. ಒಳಗಿನ ಅನ್ನವು ಬೇಯುವ ವರೆಗೆ ಆ ನಾಳಿಕೆಯು ಒಡೆಯುವದಿಲ್ಲ. ಎಷ್ಟೋ ಸಾರೆ ಅವರು ಅನ್ನವನ್ನು ಬೇಯಿಸದೇ ಹಾಗೇ ತಿನ್ನುವದುಂಟು. ಗಿಡಗಳ ತೊಗಟಿಗಳಿಂದ ತಮ್ಮ ಉಡುಪುಗಳನ್ನು ಮಾಡಿಕೊಳ್ಳುತ್ತಾರೆ. ಬಿದರಿನ ಉಪಯೋಗವು ಅವರಿಗೆ ಬಹಳವಾಗಿ ಆಗುತ್ತದೆ. ಅದರ ಎಳೆ ಕೊಂಬುಗಳನ್ನು ತಿನ್ನಲಿಕ್ಕೆ ಉಪಯೋಗಿಸುತ್ತಾರೆ. ಬಿದರಿನಿಂದ ಬಾಣಗಳನ್ನು ಮಾಡುತ್ತಾರೆ. ಹೆಂಗಸರು ಅವುಗಳ ಹಣಿಗೆಗಳನ್ನು ಮಾಡಿ ಬಾಚಿಕೊಳ್ಳಲಿಕ್ಕೆ ಉಪಯೋಗಿಸುತ್ತಾರೆ. ಬಿದರಿನ ತುಂಡುಗಳನ್ನು ಅವರು ಚೂರಿಗಳಂತೆ ಸಹ ಉಪಯೋಗಿಸುತ್ತಾರೆ.

ಈ ಭಾಗದೊಳಗಿನ ಜನಜೀವನವು ಕಷ್ಟದಾಯಕವಾಗಿರುತ್ತದೆ. ಧ್ರುವ ಪ್ರದೇಶದಲ್ಲಿ ಅತಿ ಚಳಿ ಇರುತ್ತದೆ. ಆದರೆ ಇಲ್ಲಿ ಉಷ್ಣಹವೆ ಮತ್ತು ಸಾಕಷ್ಟು ಮಳೆ ಇರುತ್ತದೆ. ಅತಿ ಚಳಿ ಮತ್ತು ಅತಿ ಉಷ್ಣತೆಗಳಿಂದ ಮನುಷ್ಯನು ತನ್ನ ಸಂರಕ್ಷಣೆಯನ್ನು ಮಾಡಿಕೊಳ್ಳುವನು. ಆದರೆ ಎರಡೂ ಪ್ರದೇಶಗಳಲ್ಲಿ ಅನ್ನದ ಕೊರತೆಯು ಮಾತ್ರ ಒಂದೇ ಆಗಿರುತ್ತದೆ. ಆಹಾರದ ಸಲುವಾಗಿ ನಾಲ್ಕೂ ಕಡೆಗೆ ಅಡ್ಡಾಡುವದರಲ್ಲಿಯೇ ಇವರ ಎಲ್ಲ ವೇಳೆಯು ಹೋಗುತ್ತದೆ. ಆದ್ದರಿಂದ ಎರಡೂ ಪ್ರದೇಶದೊಳಗಿನ ಜನವಸತಿಯು ವಿರಲವಾಗಿದ್ದು, ಇದ್ದ ಜನರಾದರೂ ಅಡ್ಡಾಡಿಗರೇ ಆಗಿರುತ್ತಾರೆ. ಇದೇ ಪ್ರಕಾರದ ದಟ್ಟವಾದ ಅರಣ್ಯಗಳ ಪ್ರದೇಶವು ಆಫ್ರಿಕಾ ಖಂಡದೊಳಗೆ ಕಾಂಗೋ ಹೊಳೆಯ ಕೊಳ್ಳದಲ್ಲಿಯೂ, ದಕ್ಷಿಣ ಅಮೇರಿಕೆಯ ಅಮೆಝಾನ ಹೊಳೆಯ ಕೊಳ್ಳದಲ್ಲಿಯೂ ಕಂಡುಬರುತ್ತದೆ. ಆಫ್ರಿಕೆಯ ಅರಣ್ಯದಲ್ಲಿ 'ಪಿಗ್ಮೀ' ಎಂಬ ಜನರು ವಾಸಿಸುತ್ತಾರೆ. ಅವರಾದರೂ ಅಡ್ಡಾಡಿಗರೇ. ಅವರ ವಸತಿಯಾದರೂ ತೀರ ವಿರಲವಾಗಿರುತ್ತದೆ.

## ಪ್ರಶ್ನೆಗಳು

೧. ವಿಷುವ ವೃತ್ತದ ಮೇಲಿನ ಪ್ರದೇಶಗಳ ಹವಾಮಾನವು ಹೇಗಿರುತ್ತದೆ? ಇಂಥ ಪ್ರದೇಶಗಳು ಯಾವ ಯಾವ ಖಂಡಗಳಲ್ಲಿ ಕಂಡುಬರುತ್ತವೆ?
೨. ಸೆಮಾಂಗ ಜನರ ಜೀವನವನ್ನು ವರ್ಣಿಸಿರಿ.
೩. ದಟ್ಟಡವಿಯ ಪ್ರದೇಶದಲ್ಲಿ ಕಂಡುಬರುವ ಮುಖ್ಯವಾದ ಪ್ರಾಣಿಗಳುಯಾವವು?
೪. ಅಲ್ಲಿಯ ಜನರು ಬಿದಿರನ್ನು ಹೇಗೆ ಉಪಯೋಗ ಮಾಡಿಕೊಳ್ಳುತ್ತಾರೆ?
೫. ಸೇಮಾಂಗ ಜನರ ಮುಖ್ಯವಾದ ಆಹಾರಗಳು ಯಾವವು? ಅವುಗಳನ್ನು ಅವರು ಹೇಗೆ ದೊರಕಿಸಿಕೊಳ್ಳುವರು?
೬. ಧ್ರುವ ಪ್ರದೇಶ ಮತ್ತು ವಿಷುವ ವೃತ್ತಗಳ ಹತ್ತರದ ಪ್ರದೇಶಗಳೊಳಗಿನ ಸಾಮ್ಯವೈಷಮ್ಯಗಳನ್ನು ಹೇಳಿರಿ.

ಪಾಠ ೨೮

# ಸಹರಾ ಉಸುಬಿನ ಅರಣ್ಯ

ಧ್ರುವ ಪ್ರದೇಶ ಮತ್ತು ವಿಷುವ ವೃತ್ತದ ಹತ್ತರಿರುವ ಪ್ರದೇಶಗಳೊಳಗಿನ ಜನಜೀವನವು ಎಷ್ಟು ಕಷ್ಟದಾಯಕವಾಗಿರುತ್ತದೆಂಬದನ್ನು ನಾವು ನೋಡಿದೆವು. ಅಲ್ಲಿಯ ಜನರಿಗೆ ಯಾವಾಗಲೂ ಅಡ್ಡಾಡಬೇಕಾಗುತ್ತದೆ. ಇನ್ನು ನಾವು ಸಹರಾ ಎಂಬ ಉಸುಬಿನ ಅರಣ್ಯಕ್ಕೆ ಹೋಗಿ ಅಲ್ಲಿಯ ಜನಜೀವನವು ಹೇಗೆ ಇರುತ್ತದೆಂಬದನ್ನು ನೋಡೋಣ. ಸಹರಾದಂಥ ಉಸುಬಿನ ಅರಣ್ಯ




ಆಕೃತಿ ೬೭ ಜಗತ್ತಿನೊಳಗಿನ ಉಸುಬಿನ ಅರಣ್ಯಗಳು

ಗಳು ಜಗತ್ತಿನಲ್ಲಿ ಎಷ್ಟೋ ಕಡೆಗೆ ಇರುತ್ತವೆ. ನಮ್ಮ ದೇಶದೊಳಗಿನ ಥಾರದ ಅರಣ್ಯವಾದರೂ ಇದೇ ಪ್ರಕಾರದ್ದಿರುತ್ತದೆ.

ಇಲ್ಲಿ ಮಳೆಯಾಗುವದೇ ಇಲ್ಲ. ಆದ್ದರಿಂದಲೇ ಈ ಪ್ರದೇಶಕ್ಕೆ ಉಸುಬಿನ ಅರಣ್ಯವೆಂದೆನ್ನುತ್ತಾರೆ. ಇಡೀ ವರುಷದೊಳಗೆ ಐದು ಇಂಚಿನಷ್ಟು ಮಳೆಯು ಸಹ ಆಗುವದಿಲ್ಲ. ನಾಯಿಲದಂಥ ಹೊಳೆ ಹರಿಯುವ ಸ್ಥಳಗಳಲ್ಲಿ ಮಾತ್ರ ದಟ್ಟಾದ ಜನವಸತಿ ಇರುತ್ತದೆ. ಉಳಿದ ಕಡೆಯಲ್ಲಿ ಜನವಸತಿಯು ತೀರ ವಿರಲವಾಗಿರುತ್ತದೆ. ಸಹರಾ ಅರಣ್ಯವು ಸಪಾಟಾಗಿರುವದಿಲ್ಲ. ಕೆಲವು

ಭಾಗಗಳಲ್ಲಿ ಎತ್ತರವಾದ ತಪ್ಪಲುಗಳಿರುತ್ತವೆ. ಅಲ್ಲಿ ಒಮ್ಮೊಮ್ಮೆ ಬಿರುಗಾಳಿಗಳು ಬೀಸಿ ಮಳೆಯನ್ನು ತರುತ್ತವೆ. ಆದರೂ ಕೂಡಲೆ ಅದು ಉಸುಬಿನಲ್ಲಿ ಇಂಗಿ ಹೋಗುತ್ತದೆ. ಕೆಲವು ತಗ್ಗು ಪ್ರದೇಶಗಳಲ್ಲಿ ನೀರು ನಿಂತು, ಅಲ್ಲಿ ನಿರಂತರವಾಗಿ ನೀರು ಉಳಿಯುತ್ತದೆ. ಇಂಥ ಪ್ರದೇಶಗಳಿಗೆ 'ಓಯಾಸಿಸ್'



ಆಕೃತಿ ೬೮ ಓಯಾಸಿಸ್

ಎಂದೆನ್ನುತ್ತಾರೆ. ಇಂಥ ಪ್ರದೇಶಗಳು ಸಹರಾ ಅರಣ್ಯದಲ್ಲಿ ಅಲ್ಲಲ್ಲಿ ಎಷ್ಟೋ ಕಡೆಗೆ ಇರುತ್ತವೆ. ಅಲ್ಲಿ ಖಜೂರಿನ ಗಿಡಗಳು ಬಹಳ ಚನ್ನಾಗಿ ಬೆಳೆಯುತ್ತವೆ. ಕೆಲವು ಓಯಾಸಿಸ್ಸುಗಳು ಸಾಕಷ್ಟು ದೊಡ್ಡವಿದ್ದು ಅಲ್ಲಿ ಜನವಸತಿಯಾದರೂ ಇರುತ್ತದೆ. ಅಲ್ಲಿ ಖಜೂರು ಅಲ್ಲದೆ ಗೋಧಿ, ಜವೆಗೋದಿ ಅಕ್ಕಿ ಮತ್ತು ಕಾಯಿ ಪಲ್ಯೆಗಳು ಸಹ ಬೆಳೆಯುತ್ತವೆ. ಓಯಾಸಿಸ್ಸುಗಳಲ್ಲಿಯ ಮನೆಗಳೆಲ್ಲ ಮೇಲು ಮುಚ್ಚಿಯವೇ ಇರುತ್ತವೆ. ಸಹರಾ ಅರಣ್ಯದೊಳಗಿನ ಹವೆಯು ವಿಷಮವಾಗಿರುತ್ತದೆ. ಹಗಲು ಅತಿ ಉಷ್ಣವಾಗಿದ್ದು ರಾತ್ರಿಯಲ್ಲಿ ಅತಿ ತಂಪಾಗಿರು

ತ್ತದೆ. ಹಗಲಿನಲ್ಲಿ ಹತ್ತು ಗಂಟೆಯಾದ ಬಳಿಕ ಹೊರಗೆ ಹೋಗುವದು ಅಸಾಧ್ಯವಾಗಿರುತ್ತದೆ. ಓಯಾಸಿಸ್ಸುಗಳಲ್ಲಿ ನಿರಂತರವಾದ ಜನವಸತಿ ಇದ್ದು, ಅವುಗಳೊಳಗಿನ ಹಳ್ಳಿಗಳಲ್ಲಿ ಪರಸ್ಪರ ವ್ಯಾಪಾರವು ಸಾಗುತ್ತದೆ. ಅದರಂತೆ ಆಡು, ಕುರಿ ಮತ್ತು ಒಂಟೆಗಳ ಹಿಂಡುಗಳನ್ನು ಕಟ್ಟಿಕೊಂಡು ವ್ಯಾಪಾರದ



ಆಕೃತಿ ೬೯ ಒಂಟೆಗಳ ಸಾಲು (ಕಾರವಾನ)

ಸಲುವಾಗಿ ಅಡ್ಡಾಡುವ ಜನರ ಗುಂಪುಗಳಾದರೂ ಸಾಕಷ್ಟು ಇರುತ್ತವೆ. ಈ ಗುಂಪುಗಳು ಒಮ್ಮೊಮ್ಮೆ ಹಾದೀ ಬಡಿಯುವದನ್ನು ಮಾಡುತ್ತಾರೆ. ಒಂದು ಓಯಾಸಿಸ್ಸಿನಿಂದ ಇನ್ನೊಂದು ಓಯಾಸಿಸ್ಸಿನ ಸರಕುಗಳನ್ನು ತಿಗೆದುಕೊಂಡು ಹೋಗುವಂಥ ವ್ಯಾಪಾರಸ್ಥರ ಮೇಲೆ ಬಿದ್ದು ಅವರನ್ನು ಸುಲಿದು, ತಮ್ಮ ಹೊಟ್ಟೆ ತುಂಬಿಕೊಳ್ಳುತ್ತಾರೆ. ಆದ್ದರಿಂದ ವ್ಯಾಪಾರಸ್ಥರು ಯಾವಾಗಲೂ ಗುಂಪುಗಟ್ಟಿಕೊಂಡೇ ಪ್ರವಾಸ ಮಾಡುತ್ತಾರೆ.

ಇಂಥ ಮಳಲು ಭೂಮಿಯಲ್ಲಿ ಸರಕುಗಳನ್ನು ಒಯ್ಯಲಿಕ್ಕೂ, ಪ್ರವಾಸ ಮಾಡಲಿಕ್ಕೂ ಒಂಟೆಗಳನ್ನು ಉಪಯೋಗಿಸುತ್ತಾರೆ. ಅವುಗಳ ಪಾದಗಳು ಮಿದುವಾಗಿರುವದರಿಂದ ಅವು ಉಸುಬಿನೊಳಗೆ ಹುದುಗುವದಿಲ್ಲ. ಒಮ್ಮೊಮ್ಮೆ ಈ ಅರಣ್ಯಗಳಲ್ಲಿ ಭಯಂಕರವಾದ ಬಿರುಗಾಳಿಗಳು ಬೀಸಿ ಅವುಗಳ ಸಂಗಡ ಬಂದ ಉಸುಬು ಪ್ರವಾಸಿಕರ ಕಣ್ಣುಮೂಗುಗಳಲ್ಲಿ ಸೇರುತ್ತದೆ. ಆದರೆ ಇಂಥ

ವೇಳೆಯಲ್ಲಿ ಒಂಟೆಗಳು ತಮ್ಮ ಮೂಗಿನ ಹೊರಳೆಗಳ ಮೇಲಿರುವ ಪರದೆ ಯಿಂದ ಅವುಗಳನ್ನು ಮುಚ್ಚಿಕೊಂಡು ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳು ತ್ತವೆ. ಈ ನಿರ್ಜಲವಾದ ಪ್ರದೇಶಗಳಲ್ಲಿ ಅವು ನೀರು ಕುಡಿಯದೇ ಎಷ್ಟೋ ದಿವಸಗಳ ವರೆಗೆ ದಿನಾಲು ಇಪ್ಪತ್ತು ಮೈಲಿನಂತೆ ಪ್ರವಾಸ ಮಾಡುತ್ತವೆ.



ಆಕೃತಿ ೭೦ ಸಹರಾದೊಳಗಿನ ಜನಜೀವನವು

ಈ ಕಾರಣಗಳಿಂದ ಒಂಟೆಗೆ 'ಅರಣ್ಯದ ಹಡಗ'ವೆಂದೆನ್ನುತ್ತಾರೆ. ಇದಲ್ಲದೇ ಒಂಟೆಯ ಮಾಂಸವನ್ನು ತಿನ್ನುತ್ತಾರೆ. ಅದರ ತೊಗಲಿನಿಂದ ನೀರು ಹಾಕ ಲಿಕ್ಕೆ ಚೀಲಗಳನ್ನು ಮಾಡುತ್ತಾರೆ. ಅದರಂತೆ ಅದನ್ನು ತಮ್ಮ ಡೇರೆಗಳ ಮೇಲೆ ಹಾಕಲಿಕ್ಕೂ ಉಪಯೋಗಿಸುತ್ತಾರೆ. ಒಂಟೆಯ ಕೂದಲಿನಿಂದ ಬಟ್ಟೆ ಯನ್ನು ಮಾಡುತ್ತಾರೆ. ಅದರ ಹಾಲನ್ನು ಕುಡಿಯಲಿಕ್ಕೆ ಉಪಯೋಗಿಸು ತ್ತಾರೆ. ಈ ರೀತಿಯಿಂದ ಒಂಟೆಯು ಅತ್ಯುಪಯುಕ್ತವಾದ ಪ್ರಾಣಿಯಾಗಿರು ತ್ತದೆ. ಉಸುಬಿನ ಅರಣ್ಯಗಳಲ್ಲಿ ಬೆಳೆಯುವ ಮುಳ್ಳುಗಂಟೆಗಳನ್ನು ತಿಂದು ಅದು ಜೀವಿಸಬಲ್ಲದು. ಆದ್ದರಿಂದ ಅದರ ಹೊಟ್ಟೆಯ ಸಲುವಾಗಿ ಬೇರೆ ವೆಚ್ಚ ಮಾಡಬೇಕಾಗುವದಿಲ್ಲ.

ಮಧ್ಯಾಹ್ನವಾದಂತೆ ಬಿಸಿಲಿನ ತಾಪವಾಗಹತ್ತಲು ವ್ಯಾಪಾರಸ್ಥರು ನಿಲ್ಲುತ್ತಾರೆ. ಮತ್ತು ಅಲ್ಲಿಯೇ ತಮ್ಮ ಡೇರೆಗಳನ್ನು ನಿಲ್ಲಿಸಿ ಅವುಗಳೊಳಗೆ ಉಳಕೊಳ್ಳುತ್ತಾರೆ. ಉಳಕೊಳ್ಳುವದಕ್ಕೆ ಬೇಕಾಗುವ ಎಲ್ಲ ವಸ್ತುಗಳು ಅವರ ಹತ್ತರ ಇರುತ್ತವೆ. ಒಂಟೆಯ ತೊಗಲಿನಿಂದ ಮಾಡಿದ ಪಕಾಲಿಯೊಳಗೆ ನೀರನ್ನು ಸಹ ಸಂಗಡ ಒಯ್ಯುತ್ತಾರೆ. ಈ ಜನರು ನೀರಿನ ಬಗ್ಗೆ ಬಹಳ ಎಚ್ಚರ ಪಡುತ್ತಾರೆ. ಕುಡಿಯುವದರ ಸಲುವಾಗಿ ಮಾತ್ರ ನೀರನ್ನು ಉಪಯೋಗಿಸುತ್ತಾರೆ. ಒಂದು ಹನಿಯನ್ನು ಸಹ ವ್ಯರ್ಥವಾಗಿ ಕಳಕೊಳ್ಳ ದಂತೆ ಅವರು ಎಚ್ಚರ ಪಡುತ್ತಾರೆ. ಅವರ ಆಹಾರವಾದರೂ ತೀರ ಸಾದಾ ಇರುತ್ತದೆ. ರೊಟ್ಟಿ, ಮಾಂಸ, ಖಜೂರುಗಳೇ ಅವರ ಮುಖ್ಯ ಆಹಾರಗಳಾ ಗಿರುತ್ತವೆ. ಇಡೀ ಹಗಲು ಮತ್ತು ರಾತ್ರಿ ಉಳಿದುಕೊಂಡು ನಸುಕಿನಲ್ಲಿ ಅವರು ಮುಂದಿನ ಪ್ರವಾಸಕ್ಕೆ ಹೊರಡುತ್ತಾರೆ. ಬಿಸಿಲು ಆಗುವದರೊಳಗೆ ಆಗುವಷ್ಟೇ ಪ್ರವಾಸವನ್ನು ಮಾಡುತ್ತಾರೆ. ತಮ್ಮ ಡೇರೆಗಳನ್ನು ಕಿತ್ತುಕೊಂಡು ಒಂಟೆ ಗಳ ಮೇಲೆ ಹೇರಿದರೆಂದರೆ ತೀರಿತು. ಪ್ರವಾಸದ ಸಿದ್ಧತೆಯಾಯಿತು.

ಸಹರಾದಂಥ ಉಸುಬಿನ ಅರಣ್ಯಗಳು ಜಗತ್ತಿನಲ್ಲಿ ಬೇರೆ ಎಷ್ಟೋ ಇರುತ್ತವೆ. ಅರಬಸ್ತಾನದ ಬಹುದೊಡ್ಡ ಭಾಗವು ಮತ್ತು ಗೋಬೀ ಎಂಬ ಅರಣ್ಯವು ಏಶಿಯಾ ಖಂಡದಲ್ಲಿರುತ್ತವೆ. ದಕ್ಷಿಣ ಗೋಲಾರ್ಧದೊಳಗೆ ದಕ್ಷಿಣ ಆಫ್ರಿಕೆಯಲ್ಲಿ ಕಲಹಾರಿ, ದಕ್ಷಿಣ ಅಮೇರಿಕೆಯಲ್ಲಿ ಆಟಾಕಾಮಾ ಮುಂತಾದ ಎಷ್ಟೋ ಉಸುಬಿನ ಅರಣ್ಯಗಳಿರುತ್ತವೆ. ಈ ಪ್ರದೇಶಗಳ ಮೇಲೆ ಸಮುದ್ರದ ಗಾಳಿಗಳು ಬೀಸುವದಿಲ್ಲ. ಆದ್ದರಿಂದ ಇಲ್ಲಿ ಮಳೆಯಾಗುವದಿಲ್ಲ. ಅಲ್ಲಲ್ಲಿ ಕಂಡುಬರುವ ಓಯಾಸಿಸ್ಸುಗಳಲ್ಲಿ ಮಾತ್ರ ನೀರಿನ ಸೌಕರ್ಯ ವಿರುತ್ತದೆ. ಅಲ್ಲಿ ಮಾತ್ರ ಜನವಸತಿಯು ಇರುತ್ತದೆ.

## ಪ್ರಶ್ನೆಗಳು

೧. ವಿಷಮ ಹವೆ ಎಂದರೆ ಏನು? ಅದರ ವಿರುದ್ಧವಾದ ಹವಾಮಾನವು ಯಾವದು? ಅವು ಯಾವ ಪ್ರದೇಶಗಳಲ್ಲಿ ಕಂಡುಬರುತ್ತವೆ?

೨. ಓಯಾಸಿಸ್ ಅಂದರೆ ಏನು? ಅಲ್ಲಿಯ ಹುಟ್ಟುವಳಿಗಳು ಯಾವವು?

೩. ಉಸುಬಿನ ಅರಣ್ಯಗಳಲ್ಲಿ ಪ್ರವಾಸವನ್ನು ಹೇಗೆ ಮಾಡುತ್ತಾರೆ?

೪. ಒಂಟೆಗೆ 'ಅರಣ್ಯದ ಹಡಗ'ವೆಂದು ಏಕೆ ಕರೆಯುತ್ತಾರೆ?

೫. ಜಗತ್ತಿನೊಳಗಿನ ಮುಖ್ಯವಾದ ಉಸುಬಿನ ಅರಣ್ಯಗಳು ಯಾವವು? ಮತ್ತು ಅವು ಎಲ್ಲಿರುತ್ತವೆ?

೬. ಉಸುಬಿನ ಅರಣ್ಯಗಳಲ್ಲಿ ವಾಸಿಸುವ ಜನರ ಮುಖ್ಯ ಆಹಾರವೇನು?

ಪಾಠ ೨೯

# ಚಳಿಗಾಲದಲ್ಲಿ ಮಳೆಯಾಗುವ ಪ್ರದೇಶ

## (ಭೂಮಧ್ಯ ಸಾಮುದ್ರಿಕ ಹವೆಯ ಪ್ರದೇಶ)

ಸಹರಾ ಅರಣ್ಯದ ಉತ್ತರಕ್ಕೆ ಭೂಮಧ್ಯ ಸಮುದ್ರವಿರುತ್ತದೆ. ಅದರ ಸುತ್ತಲೂ ಇರುವ ಪ್ರದೇಶದೊಳಗೆ ಚಳಿಗಾಲದಲ್ಲಿ ಮಳೆಯಾಗುತ್ತದೆ. ಸೂರ್ಯನು ದಕ್ಷಿಣ ಗೋಲಾರ್ಧದ ಕಡೆಗೆ ಹೋದಾಗ ಅಟಲಾಂಟಿಕ ಮಹಾ




ಆಕೃತಿ ೨೧ ಜಗತ್ತಿನೊಳಗಿನ ಭೂಮಧ್ಯ ಸಾಮುದ್ರಿಕ ಹವೆಯ ಪ್ರದೇಶಗಳು

ಸಾಗರದ ಮೇಲಿಂದ ಬೀಸುವ ಗಾಳಿಗಳು ಮಳೆಯನ್ನು ತರುತ್ತವೆ. ಮತ್ತು ಅದು ಈ ಪ್ರದೇಶದೊಳಗೆ ಬೀಳುತ್ತದೆ. ಉತ್ತರ ಗೋಲಾರ್ಧದೊಳಗೆ ಆಗ ಚಳಿಗಾಲವಿರುತ್ತದೆ. ಆದ್ದರಿಂದ ಆ ಮಳೆಗೆ ಚಳಿಗಾಲದ ಮಳೆ ಎಂದೆನ್ನು

ತ್ತಾರೆ. ಮತ್ತು ಈ ಪ್ರಕಾರವಾಗಿ ಮಳೆಬೀಳುವ ಜಗತ್ತಿನೊಳಗಿನ ಬೇರೆ ಬೇರೆ ಪ್ರದೇಶಗಳಿಗಾದರೂ ಚಳಿಗಾಲಧಲ್ಲಿ ಮಳೆ ಬೀಳುವ ಪ್ರದೇಶ ಅಥವಾ ಭೂಮಧ್ಯ ಸಾಮುದ್ರಿಕ ಹವೆಯ ಪ್ರದೇಶಗಳೆಂದೆನ್ನುತ್ತಾರೆ. ಸಾಧಾರಣವಾಗಿ ೩೦ ರಿಂದ ೪೦ ಅಕ್ಷಾಂಶಗಳಲ್ಲಿ ಇಂಥ ಪ್ರದೇಶಗಳು ಬರುತ್ತವೆ. ಈ ಪ್ರದೇಶ ಗಳಲ್ಲಿ ಬೇಸಿಗೆಯಲ್ಲಿ ಮಳೆಯೇ ಆಗುವದಿಲ್ಲ. ಹಿಂದೂಸ್ಥಾನದ ಪೂರ್ವ ದಂಡೆಯ ಮೇಲೆ ಚಳಿಗಾಲದಲ್ಲಿ ಮಳೆಯಾಗುತ್ತದೆ. ಆದರೆ ಅಲ್ಲಿ ಬೇಸಿಗೆಯಲ್ಲಿಯೂ ಮಳೆಯಾಗುವದರಿಂದ ಅದು ಭೂಮಧ್ಯ ಸಾಮುದ್ರಿಕ ಹವೆಯ ಪ್ರದೇಶದಲ್ಲಿ ಸಮಾವೇಶವಾಗುವದಿಲ್ಲ. ಅಲ್ಲಿ ಮಳೆಯಾಗುವ ಕಾರಣಗಳು ಬೇರೆಯಾಗಿರುತ್ತವೆ.

ಯುರೋಪ ಖಂಡದೊಳಗೆ ಸ್ಪೇನ, ಇಟಲೀ, ಫ್ರಾನ್ಸ ಮುಂತಾದ ದೇಶಗಳಲ್ಲಿ ಈ ಪ್ರಕಾರದ ಹವಾಮಾನವಿರುತ್ತದೆ. ಬೇಸಿಗೆಯು ಒಣದಾಗಿರುತ್ತದೆ. ಚಳಿಗಾಲದಲ್ಲಿ ಮಳೆ ಬೀಳುತ್ತದೆ. ವರ್ಷದೊಳಗೆ ಸರಾಸರಿ ೩೦ ಇಂಚಿನಷ್ಟು ಮಳೆಯಾಗುತ್ತದೆ. ಬೇಸಿಗೆಯಲ್ಲಿ ಆಕಾಶವು ನಿರಭ್ರವಾಗಿರುತ್ತದೆ. ಗಿಡಗಳೊಳಗಿನ ಆರ್ದ್ರತೆಯು ಹೋಗಬಾರದೆಂದು ಅವುಗಳ ತೊಗಟೆ ಮತ್ತು ಎಲೆಗಳ ಮೇಲೆ ಮೇಣದಂಥ ಜಿಗುಟು ಪದಾರ್ಥದ ಹೊದಿಕೆ ಇರುತ್ತದೆ. ಈ ಪ್ರದೇಶದೊಳಗಿನ ಗಿಡಗಂಟಿಗಳು ಯಾವಾಗಲೂ ಹಚ್ಚಗೆ ಇರುತ್ತವೆ. ಬೇಸಿಗೆಗಿಂತ ಚಳಿಗಾಲದಲ್ಲಿ ಹವೆಯೊಳಗೆ ಆರ್ದ್ರತೆಯು ಹೆಚ್ಚಾಗಿರುತ್ತದೆ. ಈ ಭಾಗದೊಳಗೆ ಹಣ್ಣುಹಂಪಲಗಳು ವಿಪುಲವಾಗಿ ಬೆಳೆಯುತ್ತವೆ. ದ್ರಾಕ್ಷೆ, ಕಿತ್ತಳೆ, ಸಕ್ಕರೆ ಲಿಂಬೆ (ಮೋಸಂಬಿ) ಮುಂತಾದ ಹಣ್ಣುಗಳು ಹೇರಳವಾಗಿ ಬೆಳೆಯುತ್ತವೆ. ಅದರಂತೆ ಇಲ್ಲಿ ಆಲಿವ್ಹದ ಗಿಡಗಳಾದರೂ ಬಹಳ ಬೆಳೆಯುತ್ತವೆ. ಆಲಿವ್ಹದ ಹಣ್ಣಿನಿಂದ ಇಲ್ಲಿಯ ಜನರು ಎಣ್ಣೆ ತೆಗೆಯುತ್ತಾರೆ, ಮತ್ತು ಅವನ್ನು ಅಡಿಗೆಯೊಳಗೆ ಹೆಚ್ಚಾಗಿ ಉಪಯೋಗಿಸುತ್ತಾರೆ. ಈ ಎಣ್ಣೆಯೊಳಗೆ ಮುಳುಗಿಸಿಟ್ಟ ಮೀನಗಳು ಬಹಳ ದಿವಸಗಳ ವರೆಗೆ ತಡೆಯುತ್ತವೆ. ಸ್ಪೇನ ಮತ್ತು ಪೋರ್ತುಗಲ ದೇಶಗಳೊಳಗೆ ಈ ಪ್ರಕಾರವಾಗಿ ಕಾದಿಟ್ಟ ಮೀನಗಳನ್ನು ಡಬ್ಬಿಗಳಲ್ಲಿ ತುಂಬಿ ಪರದೇಶಗಳಿಗೆ ಕಳಿಸುತ್ತಾರೆ. ಈ ಪ್ರದೇಶಗಳೊಳಗೆ ತುತ್ತೀ ಗಿಡಗಳು ಬಹಳ ಬೆಳೆಯುತ್ತವೆ. ಒಕ್ಕಲಿಗರು ಈ ಗಿಡಗಳನ್ನು ಹೊಲದ ಬದಿಗಳಲ್ಲಿ ಹಚ್ಚಿ, ಅವುಗಳ ಮೇಲೆ ದ್ರಾಕ್ಷದ ಬಳ್ಳಿಗಳನ್ನು ಹಬ್ಬಿಸುತ್ತಾರೆ. ಈ ರೀತಿ

ಯಿಂದ ನೆಲವನ್ನು ಉಳಿಸಿ ಅಲ್ಲಿ ಎಷ್ಟೋ ಬೇರೆ ಬೇರೆ ಬೆಳೆಗಳನ್ನು ಬೆಳೆಯುತ್ತಾರೆ. ಈ ಗಿಡಗಳ ಎಲೆಗಳ ಮೇಲೆ ರೇಶಿಮೆಯ ಹುಳಗಳು ಜೀವಿಸುತ್ತವೆ. ಆದ್ದರಿಂದ ಇಲ್ಲಿ ರೇಶಿಮೆಯು ಬಹು ದೊಡ್ಡ ಪ್ರಮಾಣದಿಂದ ಹುಟ್ಟುತ್ತದೆ. ದ್ರಾಕ್ಷೆಯಿಂದ ಮೇಲಾದ ಮದ್ಯವನ್ನು ತಯಾರು ಮಾಡಿ ಪರದೇಶಗಳಿಗೆ ಕಳಿಸುತ್ತಾರೆ.

ಈ ಭಾಗದೊಳಗಿನ ಹವೆಯು ಜನಜೀವನಕ್ಕೆ ಯೋಗ್ಯವಾಗಿರುತ್ತದೆ. ಹಣ್ಣುಹಂಪಲುಗಳೂ, ಬೆಳೆಗಳೂ ಕಷ್ಟವಿಲ್ಲದೇ ಬೆಳೆಯುತ್ತವೆ. ಆದ್ದರಿಂದ ಇಲ್ಲಿಯ ಜನರಿಗೆ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಕಷ್ಟಪಡಬೇಕಾಗುವದಿಲ್ಲ. ಇಲ್ಲಿಯ ಬೆಳೆಗಳು ಚಳಿಗಾಲದಲ್ಲಿ ಬರುತ್ತವೆ. ಗೋದಿ, ಗೋವಿನ ಜೋಳ, ಜವೆಗೋದಿ ಮುಂತಾದ ಬೆಳೆಗಳು ಚನ್ನಾಗಿ ಬರುತ್ತವೆ. ಧ್ರುವ ಪ್ರದೇಶದಲ್ಲಿಯೂ, ವಿಷುವ ವೃತ್ತದ ಹತ್ತರಿರುವ ಪ್ರದೇಶಗಳಲ್ಲಿಯೂ ವಾಸಿಸುವ ಜನರಿಗೆ ಕೇವಲ ಹೊಟ್ಟೆತುಂಬ ಅನ್ನವನ್ನು ದೊರಕಿಸುವದರಲ್ಲಿಯೇ ಇಡೀ ವೇಳೆಯನ್ನು ಕಳೆಯಬೇಕಾಗುತ್ತದೆ. ಆದರೆ ಇಲ್ಲಿ ಮಾತ್ರ ಹಾಗಾಗುವದಿಲ್ಲ. ನಿಸರ್ಗದ ಕೃಪೆಯಿರುವದರಿಂದ ಇಲ್ಲಿಯ ಜನಜೀವನವು ಸೌಖ್ಯವುಳ್ಳದ್ದಾಗಿರುತ್ತದೆ. ಆದ್ದರಿಂದ ಇಲ್ಲಿ ಮಾನವ ಸಂಸ್ಕೃತಿಯು ಬೆಳೆಯುತ್ತ ಹೋಯಿತು. ಗ್ರೀಕ ಮತ್ತು ರೋಮನ ಸಂಸ್ಕೃತಿಗಳು ಅತಿ ಪ್ರಾಚೀನ ಕಾಲದಲ್ಲಿ ಉನ್ನತ ಶಿಖರಕ್ಕೆ ಮುಟ್ಟಿದ್ದವಲ್ಲದೆ, ಅರ್ವಾಚೀನ ಕಾಲದ ಸಂಸ್ಕೃತಿಯ ಅಡಿಯನ್ನೇ ಹಾಕಿದವು.

ಇದೇ ಪ್ರಕಾರದ ಹವಾಮಾನವು ಜಗತ್ತಿನ ಇನ್ನಿತರ ಕಡೆಗಳಲ್ಲಿಯೂ ಕಂಡುಬರುತ್ತದೆ. ಉತ್ತರ ಅಮೇರಿಕೆಯೊಳಗೆ ಕೆಲಿಫೋರ್ನಿಯಾ, ದಕ್ಷಿಣ ಅಮೇರಿಕೆಯಲ್ಲಿ ಚಿಲೀದೇಶದ ಮಧ್ಯಭಾಗ, ದಕ್ಷಿಣ ಆಫ್ರಿಕೆಯಲ್ಲಿ ಕೇಪ ಎಂಬ ಪ್ರಾಂತ, ಆಸ್ಟ್ರೇಲಿಯಾದ ನೈಋತ್ಯ ಮೂಲೆಯಲ್ಲಿ, ತಾಸ್ಮಾನಿಯ ಎಂಬ ದ್ವೀಪ ಮುಂತಾದ ಪ್ರದೇಶಗಳಲ್ಲಿ ಈ ಪ್ರಕಾರದ ಹವಾಮಾನವು ಕಂಡುಬರುತ್ತದೆ. ಭೂಮಧ್ಯ ಸಮುದ್ರದ ಸುತ್ತುಮುತ್ತಲಿನ ಪ್ರದೇಶದಲ್ಲಿ ಈ ಪ್ರಕಾರದ ಹವಾಮಾನವು ಕಂಡು ಬರುವುದರಿಂದ ಅದಕ್ಕೆ ಭೂಮಧ್ಯ ಸಾಮುದ್ರಿಕ ಹವಾಮಾನವೆಂಬ ಹೆಸರು ಬಂದಿದೆ. ಒಣದಾದ ಬೇಸಿಗೆ ಹಸಿಯಾದ ಚಳಿಗಾಲ ಇವು ಈ ಹವಾಮಾನದ ವೈಶಿಷ್ಟ್ಯಗಳಾಗಿರುತ್ತವೆ. ಈ ಪ್ರಕಾರದ ಪ್ರದೇಶಗಳಲ್ಲಿ ಆಲಿವ್ಹ, ದ್ರಾಕ್ಷೆ, ಮೋಸಂಬಿ ಮುಂತಾದ ಹಣ್ಣುಗಳು ಅತ್ಯುತ್ತಮವಾಗಿ ಬೆಳೆಯುತ್ತವೆ.

## ಪ್ರಶ್ನೆಗಳು

೧. ಭೂಮಧ್ಯ ಸಾಮುದ್ರಿಕ ಹವಾಮಾನವೆಂದರೇನು? ಅದಕ್ಕೆ ಈ ಹೆಸರು ಏಕೆ ಬಂದಿತು?

೨. ಈ ಪ್ರಕಾರದ ಹವಾಮಾನವಿರುವ ಪ್ರದೇಶಗಳು ಯಾವವು? ಅವು ಎಲ್ಲಿ ಇರುತ್ತವೆ?

೩. ಚಳಿಗಾಲದಲ್ಲಿ ಮಳೆಯಾಗುವ ಪ್ರದೇಶಗಳ ಮುಖ್ಯವಾದ ಹುಟ್ಟುವಳಿಗಳು ಯಾವವು?

೪. ಸ್ಪೇನ ಪೋರ್ತುಗಾಲದಿಂದ ಕಾದಿಟ್ಟ ಮೀನಗಳು ಹೊರಗೆ ಹೋಗುತ್ತವೆ. ಯಾಕೆ?

೫. ದ್ರಾಕ್ಷಿ, ಆಲಿವ್ಹ ಹಣ್ಣುಗಳನ್ನು ಮುಖ್ಯವಾಗಿ ಏತಕ್ಕೆ ಉಪಯೋಗಿಸುತ್ತಾರೆ?

ಪಾಠ ೩೦

## ಹನ್ನೆರಡೂ ತಿಂಗಳು ಮಳೆಯಾಗುವ ಪ್ರದೇಶಗಳು

ಶೀತ ಕಟಿಬಂಧದೊಳಗಿನ ಖಂಡಗಳ ಪಶ್ಚಿಮ ಭಾಗದಲ್ಲಿರುವ ಪ್ರದೇಶಗಳಲ್ಲಿ ಹನ್ನೆರಡೂ ತಿಂಗಳು ಮಳೆಯಾಗುತ್ತದೆ. ಅವುಗಳ ಆಚೆಗೆ ಪಶ್ಚಿಮಕ್ಕೆ ಮಹಾಸಾಗರಗಳಿರುವದರಿಂದ ಅವುಗಳ ಮೇಲಿಂದ ಬೀಸುವ ಪಶ್ಚಿಮದ ಗಾಳಿಗಳು ಯಾವಾಗಲೂ ಭೂಮಿಯ ಕಡೆಗೆ ಬೀಸುತ್ತಿರುತ್ತವೆ. ಈ ಗಾಳಿಗಳು ಸಮುದ್ರದ ಮೇಲಿನಿಂದ ಹಾದು ಬರುವವು. ಆದ್ದರಿಂದ ಅವುಗಳಲ್ಲಿ ಆರ್ದ್ರತೆಯು ತುಂಬಿಕೊಂಡಿರುತ್ತದೆ. ಈ ಆರ್ದ್ರತೆಯಿಂದ ಭೂಮಿಯ ಮೇಲೆ ಹನ್ನೆರಡೂ ತಿಂಗಳು ಮಳೆಯಾಗುತ್ತದೆ. ಬೇಸಿಗೆಗಿಂತ ಚಳಿಗಾಲದಲ್ಲಿ ಮಳೆಯ ಪ್ರಮಾಣವು ಹೆಚ್ಚಾಗಿರುತ್ತದೆ. ಆದರೆ ಬೇಸಿಗೆಯಲ್ಲಿ ಸಹ ಮಳೆಯಾಗುತ್ತದೆ. ಅದು ಒಣದಾಗಿ ಎಂದೂ ಹೋಗುವದಿಲ್ಲ. ಯಾವಾಗಲೂ ಮಳೆಯಾಗುತ್ತಿರುವದರಿಂದ ಹವೆಯೊಳಗೆ ಆರ್ದ್ರತೆಯು ನಿರಂತರವಾಗಿ ಇರುತ್ತದೆ. ಹೆಚ್ಚಾದ ಚಳಿಯು ಇರುವದಿಲ್ಲ.

ಯುರೋಪ ಖಂಡದೊಳಗಿನ ಬ್ರಿಟಿಶ ನಡುಗಡ್ಡೆಗಳು ಈ ಪ್ರಕಾರದ ಹವಾಮಾನದೊಳಗೆ ಬರುತ್ತವೆ. ಬ್ರಿಟಿಶ ನಡುಗಡ್ಡೆಗಳೊಳಗೆ ಎರಡು ದೊಡ್ಡ ದ್ವೀಪಗಳಿದ್ದು, ಸುತ್ತುಮುತ್ತಲೂ ಸಣ್ಣ ಸಣ್ಣ ಎಷ್ಟೋ ನಡುಗಡ್ಡೆಗಳು

ಇರುತ್ತವೆ. ಇಂಗ್ಲಂಡ, ಸ್ಕಾಟ್ಲಂಡ ಮತ್ತು ವೇಲ್ಸ ಕೂಡಿ ಒಂದು ದ್ವೀಪ ವಾಗಿರುತ್ತದೆ. ಆಯರ್ಲಂಡವು ಎರಡನೇ ದೊಡ್ಡ ದ್ವೀಪವು. ಬ್ರಿಟಿಶ ನಡು ಗಡ್ಡೆಗಳು ಕ್ಷೇತ್ರದಲ್ಲಿ ನಮ್ಮ ಮುಂಬಯಿ ಪ್ರಾಂತಕ್ಕಿಂತಲೂ ಸಣ್ಣದಾಗಿರುತ್ತವೆ. ಆದರೆ ಅದರ ಜನವಸತಿಯು ಮಾತ್ರ ನಮ್ಮ ಪ್ರಾಂತದ ಎರಡೂವರೆ ಪಟ್ಟಿ ನಷ್ಟು ಇರುತ್ತದೆ. ಯಾಂಕದರೆ ಅಲ್ಲಿ ಕಾರಖಾನೆಗಳು ಬಹಳವಾಗಿರುತ್ತವೆ. ಈ ನಡುಗಡ್ಡೆಗಳೊಳಗಿನ ಜನರಿಗೆ ಉದ್ಯೋಗ ವ್ಯವಸಾಯಗಳನ್ನು ಮಾಡಿ ತಮ್ಮ ಹೊಟ್ಟೆತುಂಬಿಕೊಳ್ಳಲಿಕ್ಕೆ ಎಷ್ಟೋ ಸಾಧನಗಳಿರುತ್ತವೆ. ಆದ್ದರಿಂದ ಈ ದ್ವೀಪಗಳು ಬಹಳ ಊರ್ಜಿತಾವಸ್ಥೆಯನ್ನು ಹೊಂದಿರುತ್ತವೆ.

ಈ ದ್ವೀಪಗಳ ಹವೆಯು ಅತಿ ಉತ್ಸಾಹಜನಕವಾದದ್ದಿರುತ್ತದೆ. ಅಟಲಾಂಟಿಕ ಮಹಾಸಾಗರದ ಮೇಲಿಂದ ಬರುವ ಬೆಚ್ಚನ್ನ ಪಶ್ಚಿಮದ ಗಾಳಿ ಗಳಿಂದ ಅಲ್ಲಿಯ ಹವೆಯು ಚಳಿಗಾಲದಲ್ಲಿ ಅತಿ ಚಳಿಯಾಗಿರುವದಿಲ್ಲ. ನಾಲ್ಕೂ ಕಡೆಯಲ್ಲಿ ಸಮುದ್ರವಿರುವದರಿಂದ ಬೇಸಿಗೆಯಲ್ಲಿ ಉಷ್ಣತೆಯಾದರೂ ಹೆಚ್ಚಾಗಿ ರುವದಿಲ್ಲ. ಈ ದ್ವೀಪಗಳಲ್ಲಿ ಸಾಕಷ್ಟು ಮಳೆಯಾಗುತ್ತದೆ. ಆದ್ದರಿಂದ ಹೊಲಗಳಿಗೆ ನೀರಿನ ಕೊರತೆಯಾಗುವದಿಲ್ಲ. ನೋಡಿದತ್ತೆಲ್ಲ ಸಾಕಷ್ಟು ಹುಲ್ಲು ಬೆಳೆಯುತ್ತವೆ. ಹಳ್ಳಿಗಳಲ್ಲಿಯ ಪ್ರದೇಶವಂತೂ ಬಹು ರಮ್ಯವಾಗಿರು ತ್ತದೆ. ಎಷ್ಟೋ ಜನರು ಉದ್ಯೋಗ ವ್ಯವಸಾಯಗಳ ಸಲುವಾಗಿ ಪಟ್ಟಣ ಗಳಲ್ಲಿ ವಾಸಿಸುತ್ತಿದ್ದರೂ ಅವರಿಗೆ ಹಳ್ಳಿಗಳು ಬಹಳ ಸೇರುತ್ತವೆ. ಶ್ರೀಮಂತ ಜನರು ಹಳ್ಳಿಗಳಲ್ಲಿ ತಮ್ಮ ಮನೆಗಳನ್ನು ಕಟ್ಟುವರು. ಬಿಡುವಿನ ದಿವಸಗಳಲ್ಲಿ ಎಷ್ಟೋ ಜನರು ಪಟ್ಟಣಗಳನ್ನು ಬಿಟ್ಟು ಹಳ್ಳಿಗಳೊಳಗೆ ಹೋಗಿ ಕಾಲ ಕಳೆಯುತ್ತಾರೆ.

ಹುಲ್ಲು ಸಾಕಷ್ಟು ಸಿಗುವದರಿಂದ ಹೈನಿನ ದನಗಳು, ಕುರಿ, ಆಡು ಮತ್ತು ಕುದುರೆಗಳು ನೋಡಿದಲ್ಲೆಲ್ಲ ಕಂಡುಬರುತ್ತವೆ. ಇಲ್ಲಿ ಎಮ್ಮೆಗಳಿರು ವದಿಲ್ಲ. ಕೇವಲ ಆಕಳುಗಳೇ ಇರುತ್ತವೆ. ಹೊಲಗೆಲಸವನ್ನೆಲ್ಲ ಕುದುರೆ ಗಳಿಂದ ಮಾಡಿಸುತ್ತಾರೆ. ಎತ್ತುಗಳನ್ನು ಉಪಯೋಗಿಸುವದಿಲ್ಲ. ಪ್ರತಿಯೊಬ್ಬ ಒಕ್ಕಲಿಗನು ಹಂದಿ, ಕೋಳಿ ಮತ್ತು ಕುರಿಗಳನ್ನು ಸಾಕುತ್ತಾನೆ. ಮತ್ತು ಅವುಗಳನ್ನು ಚನ್ನಾಗಿ ಕಾಪಾಡುತ್ತಾನೆ.

ಸ್ಕಾಟ್ಲಂಡ್, ವೇಲ್ಸ ಮತ್ತು ಇಂಗ್ಲಂಡದ ವಾಯುವ್ಯ ಭಾಗಗಳು ಗುಡ್ಡಗಾಡು ಇರುತ್ತವೆ. ಅಲ್ಲಿ ಪ್ರತಿ ಒಂದೆರಡು ದಿವಸಗಳಲ್ಲಿ ಮಳೆಯು

ಬಿದ್ದೇ ಬೀಳುತ್ತದೆ. ಸಾಧಾರಣವಾಗಿ ಪ್ರತಿದಿವಸ ಮಂಜು ಬೀಳುತ್ತದೆ. ಇಂಥ ಆರ್ದ್ರವಾದ ಹವೆಯಲ್ಲಿ ಯಾವಾಗಲೂ ಹಸರು ಹುಲ್ಲು ಸಿಗುತ್ತದೆ. ಅದರ ಮೇಲೆ ದನಗಳೂ, ಕುರಿಗಳೂ ಜೀವಿಸುತ್ತವೆ. ಇದರ ಮೇಲಿಂದ ಇಲ್ಲಿ ಯಾವ ಉದ್ಯೋಗಗಳು ನಡೆಯುತ್ತಿರಬಹುದೆಂಬುದನ್ನು ನೀವು ಸುಲಭವಾಗಿ ಊಹಿಸಬಹುದು.



ಆಕೃತಿ ೭೨ ಇಂಗ್ಲಂಡದೊಳಗಿನ ಹಳ್ಳಿಯ ನೋಟ

ಇಂಗ್ಲಂಡದ ಆಗ್ನೇಯದ ಕಡೆಯ ಭಾಗವು ಬೈಲಾಗಿರುತ್ತದೆ. ಅಲ್ಲಿ ಪಶ್ಚಿಮ ಭಾಗಕ್ಕಿಂತಲೂ ಕಡಿಮೆ ಮಳೆಯಾಗುತ್ತದೆ. ಆದ್ದರಿಂದ ಇಲ್ಲಿ ಗೋದಿ, ಜವೆಗೋದಿ, ಓಟ ಮತ್ತು ಬಟಾಟೆಗಳ ಹೊಲಗಳೂ, ಕಾಯಿಪಲ್ಯೆಗಳ ತೋಟಗಳೂ ದೃಷ್ಟಿಗೆ ಬೀಳುತ್ತವೆ. ಈ ಪ್ರದೇಶದೊಳಗೆ ಪೂರ್ವಕಾಲದಲ್ಲಿ ದಟ್ಟಾದ ಅಡವಿಯು ಹಬ್ಬಿತ್ತು. ಆದರೆ ಅಲ್ಲಿಯ ಜನರು ಅವುಗಳನ್ನು ಕಡಿದು ಆ ಸ್ಥಳದಲ್ಲಿ ಹೊಲಗಳನ್ನೂ, ಹುಲ್ಲು ಗದ್ದೆಗಳನ್ನೂ ತಯಾರಿಸಿದರು.

ಆಯರ್ಲಂಡದ ಮೇಲೆ ಅಟಲಾಂಟಿಕ ಮಹಾಸಾಗರದ ಮೇಲಿಂದ ಬರುವ ಆರ್ದ್ರವಾದ ಗಾಳಿಗಳು ಯಾವಾಗಲೂ ಬೀಸುತ್ತಿರುತ್ತವೆ. ಹನ್ನೆರಡೂ ತಿಂಗಳು ಸಾಧಾರಣವಾಗಿ ಪ್ರತಿದಿವಸ ಮಳೆಯಾಗುತ್ತದೆ. ಆದ್ದರಿಂದ ಹಚ್ಚಗೆ ಮುರಿಯುತ್ತಿರುವ ಹುಲ್ಲು ಕಂಡುಬರುತ್ತದೆ.

ಆದ್ದರಿಂದ ಈ ನಡುಗಡ್ಡೆಗೆ 'ಪಚ್ಚದ ದ್ವೀಪ'ವೆಂದೆನ್ನುತ್ತಾರೆ. ಆದರೆ ಇಂಥ ಆರ್ದ್ರ ಹವೆಯಲ್ಲಿ ಗೋದಿಯು ಬೆಳೆಯುವದಿಲ್ಲ. ಅಲ್ಲಿ ಬಟಾಟೆಯು ವಿಪುಲವಾಗಿ ಬೆಳೆಯುತ್ತದೆ. ಹುಲ್ಲುಗದ್ದೆಗಳಲ್ಲಿ ಹಂದಿ ಮತ್ತು ದನಗಳು ಜೀವಿಸುತ್ತವೆ. ಪ್ರತಿಯೊಬ್ಬ ಒಕ್ಕಲಿಗನ ಮನೆಯಲ್ಲಿ ಕೋಳಿ, ನೀರು ಗೋಳಿಗಳು ಇದ್ದೇ ಇರುತ್ತವೆ. ಇಲ್ಲಿಂದ ತತ್ತಿ, ಬೆಣ್ಣೆ, ಮಾಂಸ ಮುಂತಾದ ಪದಾರ್ಥಗಳು ಪ್ರತಿ ದಿವಸ ಇಂಗ್ಲಂಡಕ್ಕೆ ಹೋಗುತ್ತವೆ.

ಬ್ರಿಟಿಶ ನಡುಗಡ್ಡೆಗಳೊಳಗಿನ ಜನರು ಸುಧಾರಣೆಯ ಅತ್ಯುಚ್ಚ ಶಿಖರ ವನ್ನು ಮುಟ್ಟಿರುವರು. ಯಾಕಂದರೆ ಅವರು ಉದ್ಯೋಗ ವ್ಯವಸಾಯಗಳಲ್ಲಿ ಬಹು ಊರ್ಜಿತಾವಸ್ಥೆಯನ್ನು ಹೊಂದಿರುವರು. ಬ್ರಿಟಿಶ ನಡುಗಡ್ಡೆಗಳಲ್ಲಿ ಕಲ್ಲಿದ್ದಲಿ ಮತ್ತು ಕಬ್ಬಿಣಗಳು ವಿಪುಲವಾಗಿ ಸಿಗುತ್ತವೆ. ಆದ್ದರಿಂದ ಈ ದ್ವೀಪಗಳು ಉದ್ಯೋಗ ವ್ಯವಸಾಯಗಳಲ್ಲಿ ಬಹಳ ಮುಂದುವರೆದಿರುತ್ತವೆ. ಭೂಮಧ್ಯ ಸಮುದ್ರದ ಸುತ್ತಲಿನ ಪ್ರದೇಶಗಳಲ್ಲಿ ನಿಸರ್ಗದ ಕೃಪೆಯಿಂದ ತುಸು ಶ್ರಮಮಾಡಿ ಮನುಷ್ಯನು ಜೀವಿಸಬಲ್ಲನು. ಹಾಗೆ ಬ್ರಿಟಿಶ ನಡುಗಡ್ಡೆ ಗಳಲ್ಲಿ ಇರುವದಿಲ್ಲ. ಇಲ್ಲಿಯ ಜನರಿಗೆ ಸಾಕಷ್ಟು ದುಡಿದು ನಿಸರ್ಗವನ್ನು ಜಯಿಸಬೇಕಾಗುತ್ತದೆ. ಆದರೆ ಈ ಭಾಗದೊಳಗಿನ ಹವೆಯು ಚನ್ನಾಗಿರು ವದರಿಂದ ಇಡೀ ದಿವಸ ಕೆಲಸಮಾಡಿದರೂ ಮನುಷ್ಯನಿಗೆ ದಣಿವಾಗುವದಿಲ್ಲ. ತಂಪಾದ ಹವೆ ಇರುವದರಿಂದ ಮೈ ಬೆವರುವದಿಲ್ಲ. ಆದ್ದರಿಂದ ದಣಿದಂತೆ ಅನಿಸುವದಿಲ್ಲ. ನಿಸರ್ಗದ ಕೂಡ ಹೋರಾಡುವದರಿಂದ ಮನುಷ್ಯನಲ್ಲಿ ಆತ್ಮವಿಶ್ವಾಸವು ಬರುತ್ತದೆ. ಬ್ರಿಟಿಶ ಜನರ ದೊಡ್ಡಸ್ತಿಕೆಯ ಬೀಜವು ಅವರಲ್ಲಿರುವ ಈ ಆತ್ಮವಿಶ್ವಾಸದಲ್ಲಿರುತ್ತದೆ.

## ಪ್ರಶ್ನೆಗಳು

೧. ಇಂಗ್ಲಂಡದಲ್ಲಿ ಹನ್ನೆರಡೂ ತಿಂಗಳು ಮಳೆ ಏಕೆ ಬೀಳುತ್ತದೆ?
೨. ಇಂಗ್ಲಂಡದೊಳಗೆ ಗುಡ್ಡಗಾಡು ಪ್ರದೇಶಗಳು ಯಾವ ಬದಿಯಲ್ಲಿ ಇರುತ್ತವೆ? ಅಲ್ಲಿಯ ಮುಖ್ಯ ಉದ್ಯೋಗವು ಯಾವದು? ಮತ್ತು ಯಾಕೆ?
೩. ಆಯರ್ಲಂಡದ ಹುಟ್ಟುವಳಿಗಳು ಯಾವವು?
೪. ಇಂಗ್ಲಂಡದ ಜನರು ಸುಧಾರಣೆಯ ಶಿಖರಕ್ಕೆ ಹೋದ ಕಾರಣವೇನು?
೫. ಆಯರ್ಲಂಡಕ್ಕೆ ಪಚ್ಚದ ದ್ವೀಪವೆಂದು ಏಕೆ ಕರೆಯುತ್ತಾರೆ?
೬. ಬ್ರಿಟಿಶ ನಡುಗಡ್ಡೆಗಳ ಹವೆಯು ಉತ್ಸಾಹದಾಯಕವಿರುತ್ತದೆ; ಅದು ಯಾಕೆ?

# ಸ್ಟೆಪ್‌ದ ಹುಲ್ಲುಗಾವಲು ಪ್ರದೇಶ

ಪೃಥ್ವಿಯ ಮೇಲಿನ ಉಸುಬಿನ ಅರಣ್ಯಗಳ ಪಟ್ಟಿಯ ಎರಡೂ ಬದಿಗೆ ಕಡಿಮೆ ಮಳೆಯಾಗುವ ಹುಲ್ಲುಗಾವಲು ಪ್ರದೇಶಗಳ ಪಟ್ಟಿಗಳಿರುತ್ತವೆ. ಹಾಳು ಉಸುಬಿನ ಅರಣ್ಯಗಳಿಗಿಂತ ಇಲ್ಲಿ ಮಳೆಯು ಹೆಚ್ಚಾಗುತ್ತದೆ. ಆದರೂ ಆ ಮಳೆಯಿಂದ ಬೆಳೆಗಳು ಬರುವದಿಲ್ಲ. ಈ ಪ್ರದೇಶದೊಳಗೆ ಬೇಸಿಗೆಯಲ್ಲಿ ಮಳೆಯಾಗುತ್ತದೆ. ಮಳೆಯ ಪ್ರಮಾಣವು ೨೦ ಇಂಚಿನ




ಆಕೃತಿ ೭೩ ಪ್ರಥ್ವಿಯೊಳಗಿನ ಹುಲ್ಲುಗಾವಲು ಪ್ರದೇಶಗಳು

ಮೇಲೆ ಎಂದೂ ಹೋಗುವದಿಲ್ಲ. ಎಷ್ಟೋ ಸಾರೆ ಇಷ್ಟು ಸಹ ಮಳೆಯಾಗುವದಿಲ್ಲ. ಈ ಪ್ರದೇಶವು ಖಂಡಗಳ ಮಧ್ಯದಲ್ಲಿದ್ದು ಸಮುದ್ರದಿಂದ ದೂರದಲ್ಲಿರುತ್ತದೆ. ಆದ್ದರಿಂದ ಇಲ್ಲಿಯ ಹವೆಯು ವಿಷಮವಾಗಿರುತ್ತದೆ. ಭೂಮಿಯು ಫಲವತ್ತಾಗಿರುತ್ತದೆ. ಹೊಳೆಗಳಿಗೆ ಅಣೆಕಟ್ಟುಗಳನ್ನು ಕಟ್ಟಿ ಕಾಲುವೆಗಳನ್ನು ಮಾಡಿದ ಸ್ಥಳಗಳಲ್ಲಿ ಗೋದಿ, ಗೋವಿನ ಜೋಳ, ಬೀಟ ಮುಂತಾದ ಬೆಳೆಗಳು ಬರುತ್ತವೆ. ಆದರೆ ಕಾಲುವೆಗಳಿಲ್ಲದ ಪ್ರದೇಶದಲ್ಲಿ ಹುಲ್ಲು ಮಾತ್ರ ಬೆಳೆಯುತ್ತದೆ. ಮಳೆಯ ಪ್ರಮಾಣವು ತೀರ ಕಡಿಮೆ ಇರುವ ಸ್ಥಳ

ಗಳಲ್ಲಿ ಗಿಡ್ಡಾದ ಹುಲ್ಲು ಬೆಳೆಯುತ್ತದೆ. ೧೦ ರಿಂದ ೧೪ ಇಂಚಿನ ವರೆಗೆ ಮಳೆಯಾಗುವ ಸ್ಥಳಗಳಲ್ಲಿ ಎತ್ತರವಾದ ಹುಲ್ಲು ಬೆಳೆಯುತ್ತದೆ. ಈ ಹುಲ್ಲುಗಾವಲು ಪ್ರದೇಶದಲ್ಲಿ ದನಕರುಗಳನ್ನೂ, ಕುರಿಗಳನ್ನೂ, ಸಾಕುವದೇ ಮುಖ್ಯವಾದ ಉದ್ಯೋಗವಾಗಿರುತ್ತದೆ. ದನಗಳಿಗೆ ಸಾಕಷ್ಟು ಹುಲ್ಲು ಒಂದೇ ಸ್ಥಳದಲ್ಲಿ ದೊರೆಯುವ ಹಾಗೆ ಇರುವದಿಲ್ಲ. ಆದ್ದರಿಂದ ಇಲ್ಲಿಯ ಜನರಿಗೆ



ಆಕೃತಿ ೭೪ ಕಿರಗೀಜ ಜನರ ಬೀಡಾರು

ತಮ್ಮ ಹಿಂಡುಗಳನ್ನು ಕಟ್ಟಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಡ್ಡಾಡಬೇಕಾಗುತ್ತದೆ. ಇಲ್ಲಿಯ ಜನರು ಅಡ್ಡಾಡಿಗರಾಗಿರುತ್ತಾರೆ.

ಪೃಥ್ವಿಯೊಳಗಿನ ಎಲ್ಲ ಖಂಡಗಳಲ್ಲಿ ಇಂಥ ಪ್ರದೇಶಗಳಿರುತ್ತವೆ. ಉಷ್ಣ ಕಟಿಬಂಧದೊಳಗಿನ ಪ್ರದೇಶಗಳಿಗೆ 'ಸವ್ಹನಾ' ಎಂದೆನ್ನುತ್ತಾರೆ. ಶೀತ ಕಟಿಬಂಧದೊಳಗಿನ ಪ್ರದೇಶಗಳಿಗೆ 'ಸ್ಟೆಪ್' ಅಥವಾ 'ಪ್ರೇಅರೀ' ಎಂಬ ಹೆಸರುಗಳಿರುತ್ತವೆ. ಯುರೋಪ ಮತ್ತು ಏಶಿಯಾ ಖಂಡಗಳೊಳಗಿನ ಇಂಥ ಹುಲ್ಲುಗಾವಲು ಪ್ರದೇಶಗಳಿಗೆ 'ಸ್ಟೆಪ್' ಎಂತಲೂ, ಉತ್ತರ ಅಮೇರಿಕೆಯೊಳಗಿನ ಪ್ರದೇಶಗಳಿಗೆ 'ಪ್ರೇಅರೀ' ಎಂತಲೂ ಅನ್ನುತ್ತಾರೆ.

ಇಲ್ಲಿ ಕಿರಗೀಜ ಎಂಬ ಜನರ ಕುಟುಂಬದ ಚಿತ್ರವಿರುತ್ತದೆ. ಯುರೇಶಿಯಾ ದೊಳಗಿನ 'ಸ್ಟೆಪ್'ದ ಪ್ರದೇಶದಲ್ಲಿ ಈ ಜನರು ವಾಸಿಸುತ್ತಾರೆ. ಇವರಿಗೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಡ್ಡಾಡುತ್ತಲೇ ತಮ್ಮ ಇಡೀ ಆಯುಷ್ಯವನ್ನು ಕಳೆಯಬೇಕಾಗುತ್ತದೆ. ಬೇಸಿಗೆಯಲ್ಲಿ ತಮ್ಮ ಹಿಂಡುಗಳನ್ನು ಕಟ್ಟಿಕೊಂಡು ಹುಲ್ಲು ಹುಡುಕುತ್ತ ಅವರು ಅಡ್ಡಾಡುತ್ತಿರುತ್ತಾರೆ. ಹೆಂಡರು ಮಕ್ಕಳು ಮನೆಮಾರು ಸಂಗಡಲೇ ಇರುತ್ತವೆ. ಎಲ್ಲಿಯಾದರೂ ಉಳಕೊಳ್ಳುವದಾದರೆ ಅಲ್ಲಿ ಡೇರೆಗಳನ್ನು ನಿಲ್ಲಿಸಿ ವಸತಿ ಇರುತ್ತಾರೆ. ಇವರ ಡೇರೆಗಳು ತೊಗಲಿನಿಂದ ಮಾಡಿದ್ದು, ಅವು ಗೋಲಾಕಾರವಾಗಿರುತ್ತವೆ. ಅವು ಸಾಕಷ್ಟು ಪ್ರಶಸ್ತವಾ ಗಿರುತ್ತವೆ. ಅವರು ಈ ಡೇರೆಗಳೊಳಗೆ ಗಾಲೀಚುಗಳನ್ನು ಹಾಸಿ ಅಂದವಾ ಗಿಟ್ಟಿರುತ್ತಾರೆ. ಈ ಜನರು ಕುದುರೆ ಹತ್ತುವವರಲ್ಲಿಯೂ, ಬಂದೂಕಿನಿಂದ ಗುರಿ ಹೊಡೆಯುವದರಲ್ಲಿಯೂ ನಿಪುಣರಾಗಿರುತ್ತಾರೆ. ಬಂದೂಕದಿಂದಲೇ ಇವರು ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುತ್ತಾರೆ. ಕುದುರೆಯ ಮೇಲೆ ಕುಳಿತು ತಮ್ಮ ದನಗಳನ್ನು ಕಾಯುತ್ತಾರೆ. ಗಂಡಸರ ಮತ್ತು ಹೆಂಗಸರ ಉಡುಪು ಗಳು ಬಹುತರವಾಗಿ ಒಂದೇ ಪ್ರಕಾರದವಿರುತ್ತವೆ. ಬೇಸಿಗೆಯಲ್ಲಿ ನೂಲಿನ ಸೈಲಾದ ಅಂಗಿಯನ್ನು ಹಾಕಿಕೊಳ್ಳುತ್ತಾರೆ. ಗಂಡಸರು ತಲೆಯ ಮೇಲೆ ಉಣ್ಣೆಯ ಟೊಪ್ಪಿಗೆಯನ್ನು ಹಾಕಿಕೊಳ್ಳುತ್ತಾರೆ. ಆದರೆ ಹೆಂಗಸರು ಬಣ್ಣದ ಅರಿವೆಯನ್ನು ತಲೆಗೆ ಸುತ್ತಿಕೊಳ್ಳುತ್ತಾರೆ.

ದನಗಳನ್ನು ಹಿಂಡುವದೂ ಹೈನಿನ ವ್ಯವಸ್ಥೆ ಮಾಡುವ ಕೆಲಸವೂ ಹೆಂಗಸರ ಕಡೆಗೆ ಇರುತ್ತವೆ. ದನಗಳನ್ನೂ, ಕುರಿಗಳನ್ನೂ ಕುದುರೆಗಳ ಮೇಲೆ ಕುಳಿತು ಕಾಯುವದು ಗಂಡಸರ ಕೆಲಸವಾಗಿರುತ್ತದೆ. ಈ ಪ್ರದೇಶದಿಂದ ಮಾಂಸ, ಬೆಣ್ಣೆ, ತೊಗಲು ಮುಂತಾದ ಪದಾರ್ಥಗಳು ಪರದೇಶಗಳಿಗೆ ಹೋಗುತ್ತವೆ. ಅವುಗಳ ಬದಲಾಗಿ ಗೋದಿಯಹಿಟ್ಟು, ಉಪ್ಪು, ಚಹ, ಸಕ್ಕರೆ, ಬಂದೂಕು ಮುಂತಾದ ಪದಾರ್ಥಗಳು ಇಲ್ಲಿ ಬರುತ್ತವೆ. ಈ ಜನರು ಒಂಟೆ ಗಳನ್ನೂ ಸಾಕುತ್ತಾರೆ. ಇಲ್ಲಿಯ ಒಂಟೆಗಳಿಗೆ ಎರಡು ಡುಬರಿಗಳಿರುತ್ತವೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಬೇಕಾದರೆ ತಮ್ಮ ಮನೆಮಾರು ಗಳನ್ನೆಲ್ಲ ಒಂಟೆಗಳ ಮೇಲೆ ಹೇರಿಕೊಂಡು ಹೊರಡುತ್ತಾರೆ.

ಈ ಪ್ರದೇಶದೊಳಗಿನ ಜನರಿಗೆ ನಿಸರ್ಗದ ಕೂಡ ಹೋರಾಡಿ ತಮ್ಮ ಜೀವನವನ್ನು ಸಾಗಿಸಬೇಕಾಗುತ್ತದೆ. ಅಡ್ಡಾಡಿಗರಿರುವದರಿಂದ ಇವರು

ಗಟ್ಟಿಗರೂ, ಶೂರರೂ ಆಗಿರುತ್ತಾರೆ. ಆದರಾತಿಥ್ಯ ಮಾಡುವವರೊಳಗೆ ಇವರು ಯಾವಾಗಲೂ ಆನಂದಪಡುತ್ತಾರೆ.

ಅಮೇರಿಕೆಯೊಳಗಿನ 'ಪ್ರೇಅರೀ' ಪ್ರದೇಶದೊಳಗೆ ಸಹ ಇದೇ ಪ್ರಕಾರದ ಜೀವನವನ್ನು ನೀವು ನೋಡಬಹುದು. ಪೂರ್ವಕಾಲದಲ್ಲಿ ರೆಡ್ ಇಂಡಿಯನ್ಸ್



ಆಕೃತಿ ೭೫ ಕಿರಗೀಜ ಜನರ ಡೇರೆ

ಎಂಬ ವನ್ಯಜಾತಿಯ ಜನರು ಇಲ್ಲಿ ವಾಸಿಸುತ್ತಿದ್ದರು. ಅವರು ಕಾಲಿನಿಂದಲೇ ಪ್ರವಾಸ ಮಾಡುತ್ತಿದ್ದರು. ಮತ್ತು ಧನುಷ್ಯಬಾಣಗಳಿಂದ ಕಾಡುಕೋಣಗಳ ಬೇಟೆಯಾಡಿ ಹೊಟ್ಟೇ ತುಂಬಿಕೊಳ್ಳುತ್ತಿದ್ದರು. ಅಮೇರಿಕೆಯ ಜನರು ಇಲ್ಲಿ ದನ ಮತ್ತು ಕುರಿಗಳ ಹಿಂಡುಗಳನ್ನು ಸಾಕಹತ್ತಿದರು. ಸಾವಿರಾರು ಎಕರೆ ಹುಲ್ಲುಗದ್ದೆಯನ್ನು ತೆಗೆದುಕೊಂಡು ದನಗಳ ನೂರಾರು ಹಿಂಡುಗಳನ್ನು ಅವರು ಸಾಕುತ್ತಾರೆ. ಇಂಥ ಹುಲ್ಲುಗದ್ದೆಗಳಿಗೆ 'ರಂಚ್' ಎಂಬ ಹೆಸರಿದ್ದು, ದನಕಾಯುವವರಿಗೆ 'ಕಾವು ಬಾಯ್' ಎಂದೆನ್ನುತ್ತಾರೆ. ಕಿರಗೀಜ ಜನರಂತೆ ಇವರಾದರೂ ಗುಂಡುವಗೆಯುವದರಲ್ಲಿಯೂ, ಕುದುರೆಯ ಮೇಲೆ ಕೂಡ್ರು ವದರಲ್ಲಿಯೂ ನಿಪುಣರಾಗಿರುತ್ತಾರೆ. ಈ ಪ್ರದೇಶದೊಳಗೆ ನೀರಿನ ಅರಬು ಮಾತ್ರ ಆಗಾಗ್ಗೆ ಬರುತ್ತದೆ. ದೊಡ್ಡ ಹೊಳೆಯಾಗಲೀ, ಹಳ್ಳಾಗಲೀ ಹರಿ ಯುವ ಸ್ಥಳದಲ್ಲಿ ದನಕಾಯುವವನು ತನ್ನ ಮನೆಯನ್ನು ಕಟ್ಟಿಕೊಳ್ಳುತ್ತಾನೆ.

ಮತ್ತು ಹಳ್ಳಕ್ಕೆ ಪಂಪು ಹಚ್ಚಿ ಹೌದಿನೊಳಗೆ ನೀರಿನ ಸಂಗ್ರಹವನ್ನು ಮಾಡು ತ್ತಾನೆ. ಇದರಿಂದ ದನಗಳಿಗೆ ನೀರಿನ ಸೌಕರ್ಯವಾಗುತ್ತದೆ. ಅದರ ಹತ್ತರವೇ ದನಕಟ್ಟುವ ಮನೆಗಳನ್ನು ಕಟ್ಟಿರುತ್ತಾರೆ. ಚಳಿಗಾಲದಲ್ಲಿ ದನಗಳು ದಡ್ಡಿಯಲ್ಲಿಯೇ ಇರುತ್ತವೆ. ಹುಲ್ಲುಗದ್ದೆಯ ಮೇಲೆಲ್ಲ ಅಲ್ಲಲ್ಲಿ ಹೌದು



ಆಕೃತಿ ೭೬ ಕಾವುಬಾಯಜ (ದನಕಾಯುವವರು)

ಗಳನ್ನು ಕಟ್ಟಿ, ದನಗಳಿಗೆ ನೀರು ಕುಡಿಯಲಿಕ್ಕೆ ಅನುವುಮಾಡಿಕೊಟ್ಟಿರು ತ್ತಾನೆ. ಅವುಗಳ ಹತ್ತರವೇ ದಡ್ಡಿಗಳನ್ನಾದರೂ ಕಟ್ಟಿರುತ್ತಾನೆ. ಬೇಸಿಗೆಯಲ್ಲಿ ಕುದುರೆಯ ಮೇಲೆ ಕುಳಿತು ಅವನು ಯಾವಾಗಲೂ ದನಗಳ ಸಂಗಡದಲ್ಲಿಯೇ ಇರುತ್ತಾನೆ. ದನಗಳು ಮೇದು ಸಾಕಷ್ಟು ಕೊಬ್ಬಿದವೆಂದರೆ, ಅವುಗಳನ್ನು ಕಟಕರ ಮನೆಗೆ ಕಳಿಸುತ್ತಾನೆ. ಅಲ್ಲಿಂದ ಅವುಗಳ ಮಾಂಸವು ಇಡೀ ಜಗತ್ತಿನ ಎಲ್ಲ ಭಾಗಗಳಿಗೂ ರಫ್ತಾಗುತ್ತದೆ. ಹೈನಿನ ದನಗಳನ್ನು ಬೇರೆ ಇಟ್ಟಿರುತ್ತಾರೆ. ಮಳೆಯ ಪ್ರಮಾಣವು ತೀರ ಕಡಿಮೆ ಇರುವ ಸ್ಥಳದಲ್ಲಿ

ಗಿಡ್ಡಹುಲ್ಲು ಬೆಳೆಯುತ್ತದೆ. ಅಲ್ಲಿ ಕುರಿಗಳನ್ನು ಸಾಕುತ್ತಾರೆ. ಈ ಅಮೇರಿಕನ್ ದನಕಾಯುವವರು ಸಹ ಕಿರಗೀಜ ಜನರಂತೆಯೇ ಶೂರರೂ, ಗಟ್ಟಿಗರೂ, ಬಿಚ್ಚುಮನಸ್ಸಿನವರೂ ಆಗಿರುತ್ತಾರೆ.

## ಪ್ರಶ್ನೆಗಳು

೧. ಜಗತ್ತಿನೊಳಗೆ ಹುಲ್ಲುಗಾವಲು ಪ್ರದೇಶಗಳು ಎಲ್ಲಿ ಇರುತ್ತವೆ? ಆವುಗಳಿಗೆ ಬೇರೆ ಬೇರೆ ದೇಶಗಳಲ್ಲಿ ಯಾವ ಹೆಸರಿನಿಂದ ಕರೆಯುತ್ತಾರೆ?

೨. ಕೆಳಗೆ ಕೊಟ್ಟವುಗಳ ಮೇಲೆ ಟಿಪ್ಪಣಿ ಬರೆಯಿರಿ:
ಅ) ಕಿರಗೀಜ ಬ) ಕಾವುಬಾಯ ಕ) ರಂಚ್

೩. ಹುಲ್ಲುಗಾವಲದೊಳಗಿನ ಜನರು ಅಲ್ಪಾಡಿಗರೇಕೆ?

೪. ಸ್ಟೆಪ್ ಪ್ರದೇಶದೊಳಗಿನ ಹವಾಮಾನವನ್ನು ವರ್ಣಿಸಿರಿ.

೫. ಪ್ರೇಅರೀ ಪ್ರದೇಶಗಳಿಂದಲೂ, ಸ್ಟೆಪ್ ಪ್ರದೇಶಗಳಿಂದಲೂ ರಫ್ತಾಗುವ ವಸ್ತುಗಳು ಯಾವವು? ಕಿರಗೀಜ ಜನರು ಯಾವ ಪದಾರ್ಥಗಳನ್ನು ಆಮದು ಮಾಡುತ್ತಾರೆ?

೬. ಕಿರಗೀಜ ಜನರ ಜೀವನವನ್ನು ವರ್ಣಿಸಿರಿ. ಮತ್ತು ಅದನ್ನು ಪ್ರೇಅರೀಯೊಳಗಿನ ಕಾವುಬಾಯನ ಜೀವನಕ್ಕೆ ಹೋಲಿಸಿರಿ.

ಪಾಠ ೩೨

# ಪೃಥ್ವಿಯ ಕವಚವು

ನಾವು ವಾಸಿಸುವ ಈ ಪೃಥ್ವಿಯು ಹೇಗೆ ಉಂಟಾಯಿತು? ಅದರ ಮೊದಲಿನ ರೂಪವು ಹೇಗೆ ಇತ್ತು? ಎಂಬುದು ನಿಮಗೆ ಗೊತ್ತಿದೆಯೋ? ಅದು ಬಹಳ ಸೋಜಿಗವಾಗಿರುತ್ತದೆ. ಪೃಥ್ವಿಯ ಉತ್ಪತ್ತಿಯು ಸೂರ್ಯನಿಂದ ಆಯಿತು. ಪೃಥ್ವಿಯು ಹುಟ್ಟಿದಾಗ ಅದು ಪ್ರಖರವಾಗಿ ಹೊಳೆಯುತ್ತಿರುವ ಅತ್ಯುಷ್ಣವಾದ ವಾಯುಗಳ ಗೋಲಕವಾಗಿತ್ತು. ಕಾಲಾಂತರದಿಂದ ಈ ವಾಯುಗಳು ಸಾವಕಾಶವಾಗಿ ತಂಪಾಗುತ್ತ ಹೋಗಿ, ಪ್ರವಾಹೀ ಘನ ರೂಪಗಳನ್ನು ಹೊಂದಿ ಕಲ್ಲುಂಟಾಯಿತು. ಈ ಕಲ್ಲಿನ ಕೆಳಗೆ ಪೃಥ್ವಿಯ ಹೊಟ್ಟೆಯೊಳಗೆ ಈಗಲೂ ಪ್ರಖರವಾದ ಉಷ್ಣತೆಯು ಇರುತ್ತದೆ. ಜ್ವಾಲಾ

ಮುಖಿಗಳಿಂದ ಹೊರಚಲ್ಲುವ ತಪ್ತವಾದ ಲಾವಾರಸದಿಂದ ನಮಗೆ ಈ ಉಷ್ಣತೆಯ ಕಲ್ಪನೆಯು ಬರುತ್ತದೆ.

ಪೃಥ್ವಿಯ ಪೃಷ್ಠಭಾಗದ ಮೇಲೆ ಈ ಶಿಲೆಯು (ಕಲ್ಲು) ನಿರ್ಮಾಣವಾದ ನಂತರ ಅದು ಮಳೆಗಾಳಿಗಳಿಂದ ಸವೆಯಲಾರಂಭಿಸಿತು. ಈ ಸವಕಳಿಯಿಂದ ಪೃಥ್ವಿಯ ಪೃಷ್ಠಭಾಗದಲ್ಲಿ ಹೆಚ್ಚು ಕಡಿಮೆಯಾಗಹತ್ತಿತು. ಪೃಥ್ವಿಯ ಪೃಷ್ಠಭಾಗದ ಮೇಲೆ ನೀರಿನ ಭಾಗವು ಹೆಚ್ಚಾಗಿದ್ದು ಭೂಭಾಗವು ಕಡಿಮೆಯಾಗಿರುತ್ತದೆ. ಶಿಲೆಗಳು ಸವೆದು ಅದರಿಂದುಂಟಾಗುವ ಕಣಗಳು ಕಟ್ಟಕಡೆಗೆ ಸಮುದ್ರದ ತಳಕ್ಕೆ ಕುಳಿತು, ಅಲ್ಲಿ ಅವು ಕಾಲಾಂತರದಿಂದ ಮತ್ತೆ ಶಿಲೆಗಳಾಗುತ್ತವೆ.

ಶಿಲೆಗಳು ಬೇರೆ ಬೇರೆ ಪ್ರಕಾರದವುಗಳಿರುತ್ತವೆ. ಜ್ವಾಲಾಮುಖಿಗಳಿಂದ ಹೊರಚಲ್ಲಿದ ತಪ್ತ ಲಾವಾರಸವು ಆರಿ ಗಟ್ಟಿಯಾದ ಕಲ್ಲಿಗೆ **'ಅಗ್ನಿಶಿಲೆ'** ಎಂದೆನ್ನುತ್ತಾರೆ. ಸಮುದ್ರದ ತಳದಲ್ಲಿ ತರಗಳ ಮೇಲೆ ತರಗಳು ಕುಳಿತು ಉಂಟಾಗುವ ಶಿಲೆಗೆ **'ಪದರುಕಲ್ಲು'** ಎಂದೆನ್ನುತ್ತಾರೆ. ಹಿಂದುಸ್ಥಾನದೊಳಗಿನ ಹಿಮಾಲಯ ಪರ್ವತವು ಇಂಥ ತರಗಳ ಕಲ್ಲಿನಿಂದಲೇ ಉಂಟಾಗಿರುತ್ತದೆ. ಒಮ್ಮೊಮ್ಮೆ ಒಂದು ತರದ ಶಿಲೆಯ ಮೇಲೆ ಇನ್ನೊಂದು ಪ್ರಕಾರದ ಶಿಲೆಯ ಆವರಣವಾಗಿ ಕೆಳಗೆ ಸಿಕ್ಕ ಶಿಲೆಯಲ್ಲಿ ರಾಸಾಯನಿಕ ಬದಲಾವಣೆಯಾಗಿ, ಹೊಸ ಜಾತಿಯ ಶಿಲೆಯು ಹುಟ್ಟುತ್ತದೆ. ಉದಾಹರಣಾರ್ಥವಾಗಿ ಸುಣ್ಣದ ಕಲ್ಲು ರಾಸಾಯನಿಕ ರೂಪಾಂತರವನ್ನು ಹೊಂದಿ **ಸಂಗಮರವರೀ** ಎಂಬ ಬಿಳೇ ಕಲ್ಲು ತಯಾರಾಗುತ್ತದೆ.

ಭೂಮಿಯ ಪೃಷ್ಠಭಾಗವು ಎಲ್ಲ ಕಡೆಯಲ್ಲಿಯೂ ಸಪಾಟಾಗಿರುವದಿಲ್ಲ. ಅದರ ಮೇಲೆ ಉನ್ನತವಾದ ಪರ್ವತ, ಗುಡ್ಡ ಮತ್ತು ದಿನ್ನೆಗಳಿರುತ್ತವೆ. ಕೆಲವು ಕಡೆಯಲ್ಲಿ ತಗ್ಗು ಪ್ರದೇಶಗಳಿದ್ದರೆ, ಬೇರೆ ಕಡೆಯಲ್ಲಿ ಎತ್ತರವಾದ ತಪ್ಪಲುಗಳಿರುತ್ತವೆ. ಪೃಥ್ವಿಯ ಪೃಷ್ಠಭಾಗದ ಮೇಲೆ ಎಷ್ಟೋ ಕಡೆಗೆ ಹೆಚ್ಚು ಕಡಿಮೆಗಳಾಗುತ್ತಿರುತ್ತವೆ. ಪೃಥ್ವಿಯ ಹೊಟ್ಟೆಯೊಳಗೆ ಉಷ್ಣತೆಯಿಂದ ಯಾವಾಗಲೂ ಚಲನವಲನೆಯು ನಡೆದೇ ಇರುತ್ತದೆ. ಜ್ವಾಲಾಮುಖೀ ಪರ್ವತಗಳು ಜಾಗ್ರತವಾಗುವದರಿಂದಲೂ, ಭೂಕಂಪಗಳಿಂದಲೂ ಪೃಥ್ವಿಯ ಪೃಷ್ಠಭಾಗದ ಮೇಲೆ ಎಷ್ಟೋ ಬದಲಾವಣೆಗಳಾಗುತ್ತಿರುತ್ತವೆ. ಮಹಾಸಾಗರಗಳಲ್ಲಿ ಒಂದು ಕಡೆಯಲ್ಲಿ ಕೆಲವು ನಡುಗಡ್ಡೆಗಳು ಮುಳುಗಿ ಅ

ವಾದರೆ, ಇನ್ನೊಂದು ಕಡೆಗೆ ಹೊಸ ನಡುಗಡ್ಡೆಗಳು ಉಂಟಾಗುತ್ತಿರುತ್ತವೆ. ಸಮುದ್ರ ಸಪಾಟಿಯಿಂದ ಎತ್ತರವಾಗಿರುವ ಪ್ರದೇಶದಲ್ಲಿಯೂ ಕೂಡ ಯಾವಾಗಲೂ ಬದಲಾವಣೆಗಳಾಗುತ್ತಿರುತ್ತವೆ. ಗಾಳಿ, ಮಳೆ, ಉಷ್ಣತೆ, ಮುಂತಾದ ಕಾರಣಗಳಿಂದ ನೆಲದ ಸವಕಳಿಯು ಒಂದೇ ಸವನೆ ನಡೆದೇ ಇರುತ್ತದೆ. ಬೇಕಾದಷ್ಟು ಬಿರುಸಾದ ಶಿಲೆ ಇದ್ದರೂ ಕೂಡ ಅದು ಕ್ರಮೇಣ ಸ[redacted] ಪುಡಿಯಾಗುತ್ತದೆ. ಇದರಿಂದ ಎತ್ತರವಾದ ಗುಡ್ಡ ಪರ್ವತಗಳಿದ್ದ ಭಾಗಗಳಲ್ಲಿ ಕಾಲಾಂತರದಿಂದ ಸವೆದು ಅಲ್ಲಿ ಬೈಲುಗಳು ಉಂಟಾಗುತ್ತವೆ. ಆದರೆ ಈ ಗುಡ್ಡಗಳು ಸವೆದು ಬೈಲು ಪ್ರದೇಶಗಳುಂಟಾಗಲಿಕ್ಕೆ ಲಕ್ಷಾವಧೀ ವರುಷಗಳು ಕಳೆಯಲಿಕ್ಕೆ ಬೇಕು. ಅಲ್ಲಿಯವರೆಗೆ ಬೇರೆ ಕಡೆಗೆ ಹೊಸ ಪರ್ವತಗಳು ಹುಟ್ಟುತ್ತಿರುತ್ತವೆ. ಈ ಪ್ರಕಾರವಾಗಿ ಈ ಚಕ್ರವು ಒಂದೇ ಸವನೇ ನಡೆದೇ ಇರುತ್ತದೆ.

ಪೃಥ್ವಿಯ ಮೇಲಿನ ಒಟ್ಟು ನೆಲದ ಕ್ಷೇತ್ರದಲ್ಲಿ ಬೈಲು ಪ್ರದೇಶದ ಪ್ರಮಾಣವೇ ಹೆಚ್ಚಾಗಿರುತ್ತದೆ. ಸಮುದ್ರ ಸಪಾಟಿಯಷ್ಟೇ ಎತ್ತರ ಉಳ್ಳ ಬೈಲುಗಳು ಸಪಾಟಾಗಿರುತ್ತವೆ. ಆದರೆ ಬೇರೆ ಕೆಲವು ಬೈಲುಗಳು ಸಂಪೂರ್ಣವಾಗಿ ಸಪಾಟಾಗಿರುವದಿಲ್ಲ. ಅಲ್ಲಲ್ಲಿ ತಗ್ಗು ದಿನ್ನೆಗಳಿರುತ್ತವೆ. ಸಮುದ್ರದ ಮೇಲಿನ ತೆರೆಗಳಂತೆ ಇವಾದರೂ ತಗ್ಗು ದಿನ್ನೆಗಳಾಗಿರುತ್ತವೆ.

ಬೇರೆ ಕೆಲವು ಬೈಲುಗಳು ಹೊಳೆಗಳಿಂದ ತರಲ್ಪಟ್ಟ ರೇವೆಯಿಂದ ಉಂಟಾಗಿರುತ್ತವೆ. ಹೊಳೆಗಳ ಪ್ರವಾಹದಗುಂಟ ಕೋಟ್ಯಾವಧಿ ಖಂಡಗಗಳಷ್ಟು ರೇವೆಯು ಪ್ರತಿವರುಷ ಸಮುದ್ರದೊಳಗೆ ಹೋಗಿ ಬೀಳುತ್ತದೆ. ಅದು ಮುಖಗಳ ಹತ್ತರ ಸಮುದ್ರದ ತಳದಲ್ಲಿ ಕೂಡಿಬೀಳುತ್ತ ಬರುತ್ತದೆ. ಮತ್ತು ಕ್ರಮೇಣ ಪದರುಗಳ ಮೇಲೆ ಪದರುಗಳು ಬೀಳುತ್ತ ಹೋಗುವದರಿಂದ ಅದು ಹೆಚ್ಚೆಚ್ಚು ಎತ್ತರವಾಗುತ್ತ ಹೋಗಿ, ಕಟ್ಟಕಡೆಗೆ ಅದು ಸಮುದ್ರದ ಪೃಷ್ಠಭಾಗದ ಮೇಲೆ ಬರುತ್ತದೆ. ಹೀಗಾದ ಕೂಡಲೇ ಹೊಳೆಯ ಮುಖವು ಸಮುದ್ರದೊಳಗೆ ಮುಂದೆ ಮುಂದೆ ಸರಿಯುತ್ತ ಹೋಗುತ್ತದೆ. ಮತ್ತು ಅಲ್ಲಿ ಸಪಾಟಾದ ಬೈಲು ತಯಾರಾಗುತ್ತದೆ. ಈ ಪ್ರಕಾರದ ಬೈಲು ಅಮೇರಿಕಾ ಖಂಡದೊಳಗೆ ಮಿಸಿಸಿಪೀ ಎಂಬ ಹೊಳೆಯ ಮುಖದಲ್ಲಿ ಉಂಟಾಗಿರುತ್ತದೆ. ಬಂಗಾಲದೊಳಗಿನ ಗಂಗಾನದಿಯ ಬೈಲಾದರೂ ಇದೇ ಪ್ರಕಾರವಾಗಿ ಉಂಟಾಗಿರುತ್ತದೆ. ಒಮ್ಮೊಮ್ಮೆ ಸಮುದ್ರವು ಹಿಂದಕ್ಕೆ ಸರಿದು, ಆ ಸ್ಥಳದಲ್ಲಿ ಬೈಲು ಪ್ರದೇಶವಾಗುತ್ತದೆ. ಈ ಪ್ರಕಾರದ

ಬೈಲುಗಳು ಸಮುದ್ರದ ದಂಡೆಗುಂಟ ಕಂಡುಬರುತ್ತವೆ. ಮುಂಬಯಿ ಪ್ರಾಂತದೊಳಗಿನ ಕೊಂಕಣ ಪಟ್ಟಿಯ ಬೈಲು ಇದೇ ರೀತಿಯಿಂದ ಉಂಟಾಗಿರುತ್ತದೆ.

ಒಮ್ಮೊಮ್ಮೆ ಯಾವಪಾದರೊಂದು ಹೊಳೆಯು ಒಂದು ಸರೋವರಕ್ಕೆ ಕೂಡುತ್ತದೆ. ಮತ್ತು ಕಾಲಾಂತರದಿಂದ ಸಂಗಡ ತಂದ ರೇವೆಯಿಂದ ಸರೋವರವೆಲ್ಲ ತುಂಬಿ ಅಲ್ಲಿ ಬೈಲುಂಟಾಗುತ್ತದೆ. ಇಂಥದೊಂದು ಬೈಲು ಉತ್ತರ ಅಮೇರಿಕೆಯೊಳಗೆ 'ಅಗಾಸೀಜ' ಎಂಬ ಸರೋವರದೊಳಗೆ ಉಂಟಾಗಿರುತ್ತದೆ. ಸರೋವರವು ಹೋಗಿ ಅಲ್ಲಿ ಬೈಲು ಪ್ರದೇಶ ಉಂಟಾಗಲು, ಹೊಳೆಯು ಮುಂದೆ ಹರಿಯಲಾರಂಭಿಸುತ್ತದೆ.

ಎಷ್ಟೋಸಾರೆ ಹೊಳೆಗೆ ಮಹಾಪೂರ ಬಂದು, ಅದರ ನೀರು ಎರಡೂ ದಂಡೆಯ ಮೇಲೆ ದೂರದ ವರೆಗೆ ಪಸರಿಸುತ್ತದೆ. ನೀರು ಇಳಿದ ಕೂಡಲೇ, ನೀರಿನ ಸಂಗಡ ಬಂದ ರೇವೆಯು ದಂಡೆಗಳ ಮೇಲೆ ಉಳಿಯುತ್ತದೆ. ಇದರಿಂದ ಹೊಳೆಗಳ ಕೊಳ್ಳಗಳಲ್ಲಿ ಬೈಲುಪ್ರದೇಶಗಳುಂಟಾಗುತ್ತವೆ. ಸಿಂಧೂ ಮತ್ತು ಗಂಗಾನದಿಯ ಬೈಲುಪ್ರದೇಶಗಳು ಇದೇ ರೀತಿಯಿಂದ ಉಂಟಾಗಿರುತ್ತವೆ.

ಹೊಳೆಗಳು ಎರಡು ಪ್ರಕಾರದ ಕಾರ್ಯಗಳನ್ನು ಮಾಡುತ್ತವೆ. ಒಂದು ವಿಧಾಯಕವಾಗಿದ್ದರೆ ಇನ್ನೊಂದು ವಿಘಾತಕವಾಗಿರುತ್ತದೆ. ತಗ್ಗುಗಳಿದ್ದಲ್ಲಿ ರೇವೆಯನ್ನು ಚಲ್ಲಿ ಅದನ್ನು ಬೈಲನ್ನಾಗಿ ಮಾಡುವದು ವಿಧಾಯಕಕಾರ್ಯವು. ಪೃಥ್ವಿಯ ಮೇಲಿನ ದೊಡ್ಡ ದೊಡ್ಡ ಬೈಲುಗಳು ಈ ಪ್ರಕಾರದ ವಿಧಾಯಕ ಕಾರ್ಯದಿಂದಲೇ ಉಂಟಾಗಿರುತ್ತವೆ. ಆದರೆ ಮೊದಲು ಇದ್ದ ಎತ್ತರವಾದ ಪ್ರದೇಶಗಳನ್ನು ಸವೆಸಿ, ಅದನ್ನು ಎರಡನೇ ಕಡೆಗೆ ಹೊತ್ತೊಯ್ದು ಅಲ್ಲಿ ಬೈಲುಗಳನ್ನುಂಟುಮಾಡುವದೆಂದರೆ ವಿಘಾತಕಕಾರ್ಯವು. ಯುರೋಪ ಖಂಡದೊಳಗೆ ತೀರ ಉತ್ತರದಿಕ್ಕಿನಲ್ಲಿರುವ ಬಾಲ್ಟಿಯಾ ಎಂಬ ಆಖಾತದೊಳಗೆ ಇಂಥ ಬೈಲು ಉಂಟಾಗಿರುತ್ತದೆ. ಅದರಂತೆ ಏಶಿಯಾ ಖಂಡದೊಳಗೆ ಸೈಬೇರಿಯಾದ ಬೈಲುಪ್ರದೇಶವಾದರೂ ಇದೇ ಪ್ರಕಾರದ್ದಿರುತ್ತದೆ; ಅಮೇರಿಕೆಯೊಳಗಿನ ಹಡಸನ್ ಬೇ ಎಂಬ ಉಪಸಾಗರದ ಹತ್ತರವಿದ್ದ ಬೈಲು ಸಹ ಹೀಗೇ ಉಂಟಾಗಿರುತ್ತದೆ.

## ಪ್ರಶ್ನೆಗಳು

೧. ಶಿಲೆಗಳಲ್ಲಿ ಎಷ್ಟು ಪ್ರಕಾರಗಳಿರುತ್ತವೆ? ಅವುಗಳ ಉತ್ಪತ್ತಿಯು ಹೇಗೆ ಆಗುತ್ತದೆ?

೨. ಪದರು ಕಲ್ಲುಗಳು ಹೇಗೆ ಉಂಟಾಗುತ್ತವೆ?

೩. ಬೈಲುಗಳುಂಟಾಗುವ ಬೇರೆ ಬೇರೆ ಕಾರಣಗಳನ್ನು ಕೊಡಿರಿ.

೪. ಹೊಳೆಗಳಿಂದುಂಟಾದ ಮುಖ್ಯವಾದ ಬೈಲುಗಳು ಯಾವವು? ಮತ್ತು ಅವು ಎಲ್ಲಿ ಇರುತ್ತವೆ?

೫. ಹೊಳೆಗಳ ವಿಧಾಯಕ ಮತ್ತು ವಿಘಾತಕ ಕಾರ್ಯಗಳು ಯಾವವು? ಅವುಗಳ ಉದಾಹರಣೆಗಳನ್ನು ಕೊಡಿರಿ.

೬. ಪೃಥ್ವಿಯ ಕವಚವು ಹೇಗೆ ಉಂಟಾಯಿತು? ಮೊದಲು ಪೃಥ್ವಿಯ ರೂಪವು ಹೇಗೆ ಇತ್ತು?

ಪಾಠ ೩೩

## ಹೊಳೆಗಳೂ ಅವುಗಳ ಕಾರ್ಯಗಳೂ

ಮಳೆಯ ನೀರು ಭೂಮಿಯ ಮೇಲೆ ಬಿದ್ದಕೂಡಲೆ, ಅದರೊಳಗಿನ ಕೆಲಭಾಗವು ಉಗಿಯಾಗಿ ಹೋಗುತ್ತದೆ; ಕೆಲಭಾಗವು ಹರಿದುಹೋಗುತ್ತದೆ. ಇನ್ನೂ ಕೆಲವು ಭಾಗವು ಭೂಮಿಯೊಳಗೆ ಇಂಗುತ್ತದೆ. ನೆಲದ ಕೆಳಗೆ ಶಿಲೆಗಳಿರುತ್ತವೆ. ಈ ಶಿಲೆಗಳೊಳಗಿಂದಲೂ ಸಹ ನೀರು ಇಂಗಿ ಹೆಚ್ಚೆಚ್ಚು ಆಳದ ವರೆಗೆ ಹೋಗ ಹತ್ತುತ್ತದೆ. ಆದರೆ ಕೆಲವು ಶಿಲೆಗಳು ಕಠಿಣವಾಗಿರುವದರಿಂದ ಅಲ್ಲಿ ನೀರು ನಿಲ್ಲುತ್ತದೆ. ಹೀಗೆ ಸಂಗ್ರಹವಾದ ನೀರು ಎಲ್ಲಿಯಾದರೂ ಹೊರ ಹೊರಡಲಿಕ್ಕೆ ಪ್ರಯತ್ನಿಸುತ್ತಿರುತ್ತದೆ. ಆಳದ ಕಡೆಗೆ ಹೋಗಲು ಅನುವಾಗದಿದ್ದರೆ, ಆ ನೀರು ಬದಿಗಳ ಕಡೆಗೆ ಹರಿದು, ಅನುವು ಸಿಕ್ಕಕಡೆಯಿಂದ ಮಾರ್ಗ ಮಾಡಿಕೊಂಡು ಕಟ್ಟಕಡೆಗೆ ಹೊರಗೆ ಬರುತ್ತದೆ. ಈ ಪ್ರಕಾರವಾಗಿ ಹರಿಯುವ ನೀರಿಗೆ ನಾವು ಝರಿ ಎಂದೆನ್ನುತ್ತೇವೆ. ಬಹುತರವಾಗಿ ಎಲ್ಲ ನದಿಗಳ ಉಗಮವು ಇಂಥ ಝರಿಗಳಿಂದಲೇ ಆಗುತ್ತದೆ. ಕೆಲವು ಹೊಳೆಗಳು ಉನ್ನತವಾದ ಪರ್ವತದ ಮೇಲಿರುವ ಹಿಮನದಿ

(ಗ್ಲೇಸಿಅರ) ಗಳಿಂದ ಉಗಮವಾಗುತ್ತವೆ. ಹಿಮನದಿಯು ಸರಿಯುತ್ತ ಸರಿಯುತ್ತ ಉಷ್ಣಪ್ರದೇಶವನ್ನು ಮುಟ್ಟಲು ಹಿಮವು ಕರಗುತ್ತದೆ. ಮತ್ತು ಆ ನೀರಿನಿಂದಲೇ ಹೊಳೆಯು ಉಂಟಾಗುತ್ತದೆ. ನಮ್ಮ ಹಿಂದುಸ್ಥಾನ ದೊಳಗಿನ ಪವಿತ್ರವಾದ ಗಂಗಾನದಿಯು ಗಂಗೋತ್ರಿ ಎಂಬ ಹಿಮನದಿ ಯಿಂದಲೇ ಹುಟ್ಟಿರುತ್ತದೆ. ಹೊಳೆಯ ಉಗಮವು ಯಾವಾಗಲೂ ಪರ್ವತ ಗಳಿಂದಲೇ ಆಗುವದರಿಂದ, ಹೊಳೆಗಳಿಗೆ ಪರ್ವತದ ಮಕ್ಕಳೆಂದು ತಿಳಿಯು ತ್ತಾರೆ. ಪರ್ವತಗಳ ಮೇಲಿಂದ ಹರಿದು ಬರುವಾಗ, ಇಳುಕಲು ಬಹಳ ವಾಗಿರುವದರಿಂದ ಹೊಳೆಯ ನೀರಿಗೆ ಬಹಳ ಸೆಳವು ಇರುತ್ತದೆ. ಮತ್ತು ನೀರು ವೇಗದಿಂದ ಕೆಳಗೆ ಬರುವದರಿಂದ, ಅದರ ಕೆಳಗೆ ಸಿಕ್ಕ ಶಿಲೆಗಳು ಸವೆಯುತ್ತ ಹೋಗಿ ಆಳವಾದ ಕಂದರಗಳುಂಟಾಗುತ್ತವೆ. ಕೆಲವು ಕಡೆ ಯಲ್ಲಿ ಬಿರುಸಾದ ಶಿಲೆ ಇರುತ್ತದೆ. ಇನ್ನೊಂದು ಕಡೆಗೆ ಮಿದುವಾದದ್ದಿರು ತ್ತದೆ. ಮಿದುವಾದ ಶಿಲೆಯು ತೀವ್ರವಾಗಿ ಸವೆದು ಹೋಗುವದು. ಆದರೆ ಬಿರುಸಾದ ಶಿಲೆಯು ಬೇಗ ಸವೆಯುವದಿಲ್ಲ. ಇಂಥ ಸ್ಥಳದಲ್ಲಿ ತಡಸಲು ಗಳುಂಟಾಗುತ್ತವೆ. ಹೊಳೆಯ ಪ್ರವಾಹವು ಬಿರುಸಾದ ಕಲ್ಲಿನ ಮೇಲಿಂದ ಕೆಳಗೆ ಬೀಳುತ್ತದೆ. ಗೆರಸಪ್ಪೆ-ಗೋಕಾವಿಯ ತಡಸಲುಗಳು ಇದೇ ಪ್ರಕಾರ ದಿಂದ ಉಂಟಾಗಿರುತ್ತವೆ. ಆದ್ದರಿಂದ ಹೊಳೆಗಳ ಈ ಮೊದಲಿನ ಭಾಗದಲ್ಲಿ ಆಳವಾದ ಕಂದರಗಳು ಕಂಡುಬರುತ್ತವೆ. ಒಡೆದ ಕಲ್ಲಿನ ತುಣುಕುಗಳು ಪ್ರವಾಹದ ಸಂಗಡ ಹಾಗೇ ಮುಂದೆ ಹೋಗುತ್ತವೆ. ಅಂದರೆ ಈ ಭಾಗದಲ್ಲಿ ಹೊಳೆಯು ಎರಡು ಪ್ರಕಾರದ ಕಾರ್ಯಗಳನ್ನು ಮಾಡುತ್ತದೆ. ಬಂಡೆಗಳನ್ನು ಒಡೆದು ಪರ್ವತಗಳನ್ನು ಸವೆಸುವದು ಮೊದಲನೇ ಕಾರ್ಯವು. ಆ ಮೇಲೆ ಒಡೆದ ಕಲ್ಲುಗಳನ್ನು ಪ್ರವಾಹದ ಸಂಗಡ ದೂರದ ವರೆಗೆ ಹೊತ್ತೊಯ್ಯುವದು ಎರಡನೇ ಕಾರ್ಯವು. ಪ್ರವಾಹದ ಸಂಗಡ ಈ ತುಣುಕುಗಳು ಒಂದ ಕ್ಕೊಂದು ತಿಕ್ಕುವದರಿಂದ ಅವು ಸವೆದು ಬೆನಕುಗಳಾಗಿ, ಕಟ್ಟಕಡೆಗೆ ಪುಡಿಯಾಗಿ ಹೋಗುತ್ತವೆ. ಈ ಪುಡಿಯೇ ಮುಂದೆ ಮಣ್ಣಾಗುತ್ತದೆ. ಈ ಮಣ್ಣು ಹೊಳೆಯ ಪ್ರವಾಹದಗುಂಟ ಮುಂದೆ ಹೋಗುತ್ತದೆ. ಈ ಭಾಗ ದಲ್ಲಿ ಹೊಳೆಗೆ ಸೆಳವು ಬಹಳವಾಗಿರುವದರಿಂದ ಅಲ್ಲಿ ನಾವೆ-ಹರಗೋಲು ಗಳನ್ನು ನಡೆಯಿಸುವದು ಅಸಾಧ್ಯವಾಗಿರುತ್ತದೆ. ಹೊಳೆಯ ಈ ಭಾಗಕ್ಕೆ '**ಮೇಲಿನ ಪ್ರವಾಹ**'ವೆಂಬ ಹೆಸರು. ಗಂಗಾನದಿಯು ಎರಡುನೂರು

ಮೈಲಿನ ವರೆಗೆ ಇದೇ ಪ್ರಕಾರವಾಗಿ ಹಿಮಾಲಯ ಪರ್ವತದೊಳಗಿಂದ ಹರಿಯುತ್ತ ಬಂದು, ಹರಿದ್ವಾರದ ಹತ್ತರ ಬೈಲುಸೀಮೆಯನ್ನು ಪ್ರವೇಶಿಸುತ್ತದೆ. ಪರ್ವತ ಪ್ರದೇಶವು ಮುಗಿದು ಹೊಳೆಯು ಪರ್ವತದ ಅಡಿಯನ್ನು ಮುಟ್ಟಲು ಅಲ್ಲಿಂದ ಅದರ **ಮಧ್ಯಪ್ರವಾಹ**ಕ್ಕೆ ಆರಂಭವಾಗುತ್ತದೆ. ಪರ್ವತವನ್ನು ಬಿಟ್ಟ ಕೂಡಲೇ ಹೊಳೆಯ ಪ್ರವಾಹದ ವೇಗವು ಕಡಿಮೆಯಾಗುತ್ತದೆ. ಮತ್ತು ಅದು ಸಾವಕಾಶವಾಗಿ ಶಾಂತರೀತಿಯಿಂದ ಹರಿಯಲಾರಂಭಿಸುತ್ತದೆ. ಆದರೆ ವೇಗವು ಕಡಿಮೆಯಾಗುತ್ತ ಹೋದ ಹಾಗೆ ಅದರ ಪಾತ್ರವು (ಒಡಲು) ಅಗಲವಾಗಹತ್ತುತ್ತದೆ. ಪರ್ವತದ ಭಾಗದಲ್ಲಿ ಹೊಳೆಯು ಆಳವಾದ ಕಂದರದಲ್ಲಿ ಹರಿಯುತ್ತದೆ. ಆಲ್ಲಿ ಅದರ ಒಡಲು ಸಣ್ಣದಿದ್ದು, ಆಳವು ಹೆಚ್ಚಾಗಿರುತ್ತದೆ. ಆದರೆ ಬೈಲಿನಲ್ಲಿ ಅದರ ಒಡಲು ಹೆಚ್ಚಾಗಿ, ಆಳವು ಕಡಿಮೆಯಾಗುತ್ತದೆ. ಅಂದರೆ ಕಂದರವು ಹೋಗಿ ಕೊಳ್ಳವುಂಟಾಗುತ್ತದೆ. ಇದು ಹೊಳೆಯ ಎರಡನೇ ಅವಸ್ಥೆಯು. ಈ ಮಧ್ಯ ಪ್ರವಾಹದೊಳಗೆ ಹೊಳೆಯ ಎರಡೂ ಬದಿಗಳು ಸವೆಯುತ್ತ ಹೋಗಿ, ಕೊಳ್ಳವು ಹೆಚ್ಚೆಚ್ಚು ಅಗಲವಾಗುತ್ತ ಹೋಗುತ್ತದೆ. ಆದರೆ ಈಗ ಹೊಳೆಯ ವೇಗವು ಕಡಿಮೆಯಾಗಿರುವದರಿಂದ ಪರ್ವತದ ಮೇಲಿಂದ ಬಂದ ಎಲ್ಲ ರೇವೆಯು ಪ್ರವಾಹದ ಸಂಗಡ ಮುಂದೆ ಹೋಗುವದಿಲ್ಲ. ಅದು ಹೊಳೆಯ ಎರಡೂ ಬದಿಗೆ ಪಸರಿಸುತ್ತದೆ. ಈ ಪ್ರಕಾರವಾಗಿ ಕೊಳ್ಳವು ತಯಾರಾಗುತ್ತದೆ. ಪ್ರತಿ ವರುಷ ಹೊಸ ರೇವೆಯು ಬಂದು ಬೀಳುವ ಕಾರ್ಯವು ನಡೆದೇ ಇರುತ್ತದೆ. ಆದ್ದರಿಂದ ಹೊಳೆಯ ಕೊಳ್ಳದೊಳಗಿನ ಭೂಮಿಯು ಬೆಳೆಯುಳ್ಳದಾಗಿ, ಬೆಳೆಗಳು ಚನ್ನಾಗಿ ಬರುತ್ತವೆ. ಮಧ್ಯಪ್ರವಾಹದೊಳಗೆ ಹೊಳೆಗೆ ಬೇರೆ ಕಡೆಯಿಂದ ಹೊಳೆಗಳು ಹರಿದು ಬಂದು ಕೂಡುತ್ತವೆ. ಈ ಪ್ರಕಾರವಾಗಿ ಬಂದು ಕೂಡುವ ಹೊಳೆಗಳಿಗೆ **ಉಪನದಿ**ಗಳೆಂದೆನ್ನುತ್ತಾರೆ. ಗಂಗಾನದಿಗೆ ಮಧ್ಯಪ್ರವಾಹದೊಳಗೆ ಎಡಗಡೆಯಿಂದ ರಾಮಗಂಗಾ, ಗೋಮತಿ, ಗೋಗ್ರಾ, ಗಂಡಕೀ, ಕೋಶೀ ಎಂಬ ಹೊಳೆಗಳು ಬಂದು ಕೂಡುತ್ತವೆ. ಹರಿದ್ವಾರದಿಂದ ರಾಜಮಹಾಲ ಗುಡ್ಡದ ವರೆಗೆ ಗಂಗಾನದಿಯು ಪೂರ್ವಾಭಿಮುಖವಾಗಿ ಹರಿಯುತ್ತದೆ. ರಾಜಮಹಾಲ ಗುಡ್ಡವನ್ನು ಸುತ್ತಿಕೊಂಡು, ಗಂಗಾನದಿಯು ಬಂಗಾಲ ಪ್ರಾಂತವನ್ನು ಸೇರುತ್ತದೆ. ಬಂಗಾಲ ಪ್ರಾಂತದೊಳಗೆ ಆದು ತೀರ ಸಮುದ್ರ ಸಪಾಟಿಯ ಮೇಲೆ ಬರುತ್ತದೆ. ಕೊಳ್ಳದೊಳಗಿನ ಮಾರ್ಗವನ್ನು ಮುಗಿಸಿ ಸಮುದ್ರ ಸಪಾಟಿಯ

ಮೇಲೆ ಬರಲು, ಹೊಳೆಯ **ಕೆಳಗಿನ ಪ್ರವಾಹಕ್ಕೆ** ಆರಂಭವಾಗುತ್ತದೆ. ಆದ್ದರಿಂದ ಇಲ್ಲಿ ಹೊಳೆಯು ತೀರ ಶಾಂತವಾಗಿ ಹರಿಯುತ್ತದೆ. ಎರಡೂ ಬದಿಗೆ ವಿಸ್ತೀರ್ಣವಾದ ಬೈಲು ಪಸರಿಸಿರುತ್ತದೆ. ಈಗ ಹೊಳೆಯ ಪಾತ್ರ ದೊಳಗೆ ನೀರು ವಿಪುಲವಾಗಿರುತ್ತದೆ. ಆದರೆ ಪ್ರದೇಶವು ಬೈಲಾಗಿರು ~~ವದರಿಂದ~~, ವೇಗವು ಮಾತ್ರ ತೀರ ಕಡಿಮೆಯಾಗಿರುತ್ತದೆ. ಈ ಭಾಗದಲ್ಲಿ ಹೊಳೆಗೆ ಬೇರೆ ಬೇರೆ ಶಾಖೆಗಳುಂಟಾಗುತ್ತವೆ. ಮತ್ತು ಈ ಶಾಖೆಗಳು (ಟಿಸಿಲುಗಳು) ಸ್ವತಂತ್ರವಾದ ಹೊಳೆಗಳಂತೆ ಹರಿಯಲಾರಂಭಿಸುತ್ತವೆ. ಬಂಗಾಲ ಪ್ರಾಂತದೊಳಗೆ ಗಂಗಾನದಿಗೆ ಇಂಥ ಎಷ್ಟೋ ಶಾಖೆಗಳು ಉಂಟಾಗಿರುತ್ತವೆ. ಅವುಗಳಿಗೆ ಭಾಗೀರಥಿ (ಹುಗಳೀ), ಮಾತಲಾ, ಕಲ್ಯಾಣಿ ಎಂಬ ಬೇರೆ ಬೇರೆ ಹೆಸರುಗಳಿರುತ್ತವೆ.

ಕೊಳ್ಳದೊಳಗೆ ಹರಿಯುವಾಗ ಹೊಳೆಯ ಎರಡೂ ದಂಡೆಗಳ ಮೇಲೆ ರೇವೆಯು ಬೀಳುತ್ತದೆ. ಆದರೂ ಹೊಳೆಯ ನೀರಿನಲ್ಲಿ ಇನ್ನೂ ರೇವೆಯು ಉಳಿದಿರುತ್ತದೆ. ಅದು ಕಟ್ಟಕಡೆಗೆ ಸಮುದ್ರದೊಳಗೆ ಹೋಗುತ್ತದೆ. ಹೊಳೆಯು ಸಮುದ್ರಕ್ಕೆ ಕೂಡುವ ಸ್ಥಳಕ್ಕೆ **ಮುಖ**ವೆಂದೆನ್ನುತ್ತಾರೆ. ಗಂಗಾ ನದಿಯು ಎಷ್ಟೋ ಮುಖಗಳಿಂದ ಸಮುದ್ರಕ್ಕೆ ಕೂಡುತ್ತದೆ. ಹೊಳೆಯ ಪ್ರವಾಹದ ಗುಂಟ ಬರುವ ರೇವೆಯು ಮುಖದ ಹತ್ತರ ಸಮುದ್ರದ ತಳ ವಲ್ಲಿ ಕೂಡಿ ಬೀಳುತ್ತದೆ. ಈ ಪ್ರಕಾರವಾಗಿ ಎಷ್ಟೋ ವರುಷಗಳ ವರೆಗೆ ನಡೆಯಲು ರೇವೆಯ ಪದರುಗಳು ಹೆಚ್ಚೆಚ್ಚು ಎತ್ತರವಾಗುತ್ತ ಹೋಗಿ ಕಟ್ಟಕಡೆಗೆ ಸಮುದ್ರವು ಹಿಂದಕ್ಕೆ ಸರಿದು, ಅಲ್ಲಿ ನೆಲ ಉಂಟಾಗುತ್ತದೆ. ಈ ಪ್ರಕಾರವಾಗಿ ತಯಾರಾದ ಭೂಮಿಯ ಆಕಾರವು ತ್ರಿಕೋಣಾಕೃತಿಯಾಗಿ ರುತ್ತದೆ. ಆದ್ದರಿಂದ ಇದಕ್ಕೆ **ತ್ರಿಭುಜ ಪ್ರದೇಶ** (ಡೆಲ್ಟಾ) ವೆಂದೆನ್ನುತ್ತಾರೆ. ಇದು ರೇವೆಯಿಂದುಂಟಾದ್ದರಿಂದ ಅದು ಬಹಳ ಬೆಳೆಯುಳ್ಳದ್ದಾಗಿರುತ್ತದೆ. ಗಂಗಾನದಿಯ ಮುಖದ ಹತ್ತರ ಉಂಟಾದ ಇಂಥ ಪ್ರದೇಶಕ್ಕೆ **ಸುಂದರಬನ** ವೆಂದೆನ್ನುತ್ತಾರೆ.

ಈ ರೀತಿಯಿಂದ ಹೊಳೆಗಳು ಒಂದು ಕಡೆಯ ಭೂಮಿಯನ್ನು ಸವೆಸಿ ಎರಡನೇ ಕಡೆಗೆ ಮಣ್ಣನ್ನು ಹೊತ್ತೊಯ್ದು ಅಲ್ಲಿ ತುಂಬುತ್ತವೆ. ಗುಡ್ಡ ಪರ್ವತಗಳನ್ನು ಅಗಿದು ತಂದ ರೇವೆಯನ್ನು ತಗ್ಗು ಪ್ರದೇಶಗಳಲ್ಲಿ ಹರಡು ತ್ತವೆ. ಉಗಮವಾಗುವ ಸ್ಥಳದಲ್ಲಿ ಹೊಳೆಗಳು ವಿಘಾತಕ ಕಾರ್ಯವನ್ನು ಮಾಡುತ್ತವೆ. ಮಧ್ಯ ಭಾಗದೊಳಗೆ ವಿಘಾತಕ ಮತ್ತು ವಿಧಾಯಕ ಎರಡೂ

ಕಾರ್ಯಗಳು ನಡೆಯುತ್ತವೆ. ಮತ್ತು ಕೆಳಭಾಗದಲ್ಲಿ ಮಾತ್ರ ಕೇವಲ ವಿಧಾಯಕ ಕಾರ್ಯವಷ್ಟೇ ನಡೆದಿರುತ್ತದೆ.

## ಪ್ರಶ್ನೆಗಳು

೧. ಝರಿಗಳೆಂದರೇನು? ಅವು ಹೇಗೆ ಉತ್ಪನ್ನವಾಗುತ್ತವೆ?

೨. ಹೊಳೆಗಳ ಪ್ರವಾಹದಲ್ಲಿ ಎಷ್ಟು ಭಾಗಗಳಿರುತ್ತವೆ? ಪ್ರತಿಯೊಂದು ಭಾಗದ ಕಾರ್ಯವೇನು?

೩. 'ತ್ರಿಭುಜ' ಪ್ರದೇಶವೆಂದರೇನು? ಅದು ಹೇಗೆ ಉಂಟಾಗುತ್ತದೆ?

೪. ಕಂದರ, ಕೊಳ್ಳ ಇವುಗಳಲ್ಲಿರುವ ಭೇದವೇನು? ಇವುಗಳಲ್ಲಿ ಹೆಚ್ಚು ಉಪಯೋಗ ಉಳ್ಳದ್ದು ಯಾವದು? ಯಾಕೆ?

೫. ಉಗಮ, ಉಪನದಿ, ಮುಖ, ಸಂಗಮಗಳೆಂದರೇನು? ಉಪನದಿಗೂ ಶಾಖಾನದಿಗೂ ಅಂತರವೇನು? ಉದಾಹರಣದಿಂದ ಸಿದ್ಧಮಾಡಿರಿ.

೬. ಗಂಗಾನದಿಯ ಮುಖ್ಯವಾದ ಉಪನದಿಗಳು ಯಾವವು? ಶಾಖಾನದಿಗಳು ಯಾವವು?

ಪಾಠ ೩೪

# ಸೂರ್ಯೋದಯವೂ ಸೂರ್ಯಾಸ್ತವೂ

ಪೃಥ್ವಿಯು ಸೂರ್ಯನ ಸುತ್ತಲೂ ತಿರುಗುತ್ತಿರುತ್ತದೆ. ಆದರೆ ನಮಗೆ ಮಾತ್ರ ಸೂರ್ಯನೇ ಪೃಥ್ವಿಯ ಸುತ್ತಲೂ ತಿರುಗುವಂತೆ ಕಾಣುತ್ತಾನೆ. ಮುಂಜಾವಿನಲ್ಲಿ ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯವಾಗುತ್ತಾನೆ. ಮಧ್ಯಾಹ್ನದಲ್ಲಿ ನೆತ್ತಿಯ ಮೇಲೆ ಬಂದು, ಸಂಜೆಯ ಮುಂದೆ ಪಶ್ಚಿಮಕ್ಕೆ ಮುಳುಗುತ್ತಾನೆ. ಸೂರ್ಯನು ಪೂರ್ವಕ್ಕೆ ಉದಯವಾಗುತ್ತಾನೆಂದು ನಾವು ಅನ್ನುತ್ತಿದ್ದರೂ ಪ್ರತಿದಿವಸ ಸೂರ್ಯನು ಉದಯವಾಗುವ ಸ್ಥಳವನ್ನು ನಾವು ಪರೀಕ್ಷಿಸಿದರೆ, ಸೂರ್ಯನು ಸರಿಯಾಗಿ ಪೂರ್ವದಿಕ್ಕಿನಲ್ಲಿ ವರುಷದೊಳಗೆ ಕೇವಲ ಎರಡೇ ಸಾರೆ ಉದಯವಾಗುವನೆಂಬುದನ್ನು ನಾವು ಕಂಡು ಕೊಳ್ಳುತ್ತೇವೆ. ಉಳಿದ ದಿವಸಗಳಲ್ಲಿ ಅವನು ಪೂರ್ವದಿಕ್ಕಿನಲ್ಲಿಯೇ ತುಸು ಉತ್ತರಕ್ಕಾಗಲೀ ಅಥವಾ ದಕ್ಷಿಣದಿಕ್ಕಿನಲ್ಲಾಗಲೀ ಹೊರಳಿದ್ದು ಕಂಡು ಬರುತ್ತದೆ. ಈ ಮಾತನ್ನು ನೀವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾದರೆ

ಕೆಳಗಿನ ಪ್ರಯೋಗವನ್ನು ಮಾಡಿರಿ:—ನಿಮ್ಮ ಶಾಲೆಯೊಳಗಿನ ಪೂರ್ವ ದಿಕ್ಕಿನಲ್ಲಿರುವ ಕಿಡಕಿಯ ಹತ್ತರ ನಿಂತು ಸೂರ್ಯೋದಯವಾದ ಕೂಡಲೆ, ಅವನ ಕಿರಣಗಳು ಯಾವ ದಿಕ್ಕಿನಿಂದ ಬಂದು ಕಿಡಕಿಯ ಕಾಜಿನ ಮೇಲೆ ಬೀಳುವವೋ ಆ ಸ್ಥಳದಲ್ಲಿ ಖಡುವಿನಿಂದ ಗುರುತು ಮಾಡಿರಿ. ಈ ರೀತಿಯಿಂದ ~~ಸತತ~~ ಮಾಡುತ್ತ ಹೋದರೆ ಸೂರ್ಯನು ಕೇವಲ ಮಾರ್ಚ ೨೧ ನೇ ತಾರೀಖಿನ ದಿವಸ ಮತ್ತು ಸಪ್ಟೆಂಬರ ೨೩ ನೇ ತಾರೀಖಿನ ದಿವಸ ಮಾತ್ರ ಸರಿಯಾಗಿ ಪೂರ್ವಕ್ಕೆ ಉದಯವಾಗುವದನ್ನು ನೀವು ನೋಡುವಿರಿ. ಅಂದರೆ ಕಿಡಕಿಯ ನಡುವಿನ ಗುರುತಿನ ಮೇಲೆ ಕಾಣಿಸುವನು. ಮಾರ್ಚ ತಿಂಗಳಿನ ೨೧ ನೇ ತಾರೀಖಿನಿಂದ ಮುಂದೆ ಪ್ರತಿದಿವಸ ಸೂರ್ಯನು ತುಸು ತುಸು ಉತ್ತರಕ್ಕೆ ಸರಿಯಹತ್ತುವನು. ಹೀಗೆ ಅವನು ಉತ್ತರಕ್ಕೆ ಸರಿಯುವ ಅವಧಿಗೆ **ಉತ್ತರಾಯಣ**ವೆಂಬ ಹೆಸರು. ಅದು ಜೂನ ೨೧ ನೇ ತಾರೀಖಿನ ವರೆಗೆ ಇರುತ್ತದೆ. ಅಲ್ಲಿಂದ ಮುಂದೆ ಸೂರ್ಯನು ದಕ್ಷಿಣಕ್ಕೆ ಸರಿಯಲು ಆರಂಭಿಸುತ್ತಾನೆ. ಸಪ್ಟೆಂಬರ ೨೩ ನೇ ತಾರೀಖಿನ ದಿವಸ ಅವನು ಸರಿಯಾಗಿ ಪೂರ್ವಕ್ಕೆ ಉದಯವಾಗುತ್ತಾನೆ. ಆ ಮೇಲೆ ೨೧ ನೇ ಡಿಸೆಂಬರದ ವರೆಗೆ ದಕ್ಷಿಣಕ್ಕೆ ಸರಿಯುತ್ತ ಹೋಗುತ್ತಾನೆ. ಇಲ್ಲಿಯ ವರೆಗಿನ ಅವಧಿಗೆ **ದಕ್ಷಿಣಾಯನ**ವೆಂಬ ಹೆಸರು. ಡಿಸೆಂಬರ ೨೧ ನೇ ತಾರೀಖಿಗೆ ದಕ್ಷಿಣಾಯನವು ಮುಗಿದು ಉತ್ತರಾಯಣವು ಆರಂಭವಾಗುತ್ತದೆ. ಅದು ಜೂನ ೨೧ ನೇ ತಾರೀಖಿನ ವರೆಗೆ ಇರುತ್ತದೆ. ೨೧ ನೇ ಮಾರ್ಚದ ದಿವಸ ಸೂರ್ಯನು ಪುನಃ ಸರಿಯಾಗಿ ಪೂರ್ವಕ್ಕೆ ಬರುತ್ತಾನೆ. ಅಲ್ಲಿಂದ ಮುಂದೆ ಸೂರ್ಯನು ಪುನಃ ಉತ್ತರದ ಕಡೆಗೆ ಸರಿಯಹತ್ತುತ್ತಾನೆ.

ಈ ಪ್ರಕಾರವಾಗಿ ಸೂರ್ಯೋದಯದ ಸ್ಥಾನವನ್ನು ಪರೀಕ್ಷಿಸುತ್ತಿರುವಾಗಲೇ ಇನ್ನೊಂದು ಪ್ರಯೋಗವನ್ನು ಮಾಡಬೇಕು. ಅದು ಯಾವದೆಂದರೆ ಸೂರ್ಯೋದಯ ಮತ್ತು ಸೂರ್ಯಾಸ್ತಗಳ ಸರಿಯಾದ ವೇಳೆಯನ್ನು ನೋಡಿ, ಅದನ್ನು ನಿಮ್ಮ ಪುಸ್ತಕದೊಳಗೆ ಬರೆದಿಡುವದು. ಪ್ರತಿ ದಿವಸ ಬರೆದಿಟ್ಟ ಈ ಅಂಕೆಗಳನ್ನು ನೀವು ಪರೀಕ್ಷಿಸಿದರೆ ಕೆಳಗಿನ ಸಂಗತಿಗಳು ನಿಮಗೆ ಸ್ಪಷ್ಟವಾಗುವವು:—(೧) ಮಾರ್ಚ ತಿಂಗಳಿನ ೨೧ ನೇ ತಾರೀಖಿನ ದಿವಸ ಹಗಲು ರಾತ್ರಿಗಳು ಹನ್ನೆರಡು ತಾಸಿನವು ಇರುತ್ತವೆ. (೨) ಈ ತಾರೀಖಿನಿಂದ ಮುಂದೆ ಹಗಲು ದೊಡ್ಡದಾಗುತ್ತ ಹೋಗಿ, ಜೂನ ೨೧ ನೇ ತಾರೀಖಿನ ದಿವಸ

ವರುಷದೊಳಗಿನ ಎಲ್ಲಕ್ಕೂ ದೊಡ್ಡ ಹಗಲು ಇರುತ್ತದೆ. (೩) ಅಲ್ಲಿಂದ ಮುಂದೆ ಹಗಲು ಸಣ್ಣದಾಗುತ್ತ ಹೋಗುತ್ತದೆ. (೪) ಸಪ್ಟೆಂಬರ ೨೩ ನೇ ತಾರೀಖಿನ ದಿವಸ ಪುನಃ ಹಗಲು ರಾತ್ರಿಗಳು ಅಷ್ಟಷ್ಟೇ ಆಗುತ್ತವೆ. ಅಂದರೆ ೧೨ ತಾಸಿನವಾಗುತ್ತವೆ. (೫) ಅಲ್ಲಿಂದ ಮುಂದೆ ಹಗಲು ಸಣ್ಣದೂ ರಾತ್ರಿಯು ದೊಡ್ಡದೂ ಆಗುತ್ತ ಹೋಗಿ, ಡಿಸೆಂಬರ ೨೧ ನೇ ತಾರೀಖಿನ ದಿವಸ ಎಲ್ಲಕ್ಕೂ ದೊಡ್ಡ ರಾತ್ರಿಯಾಗುತ್ತದೆ. ಅಂದರೆ ಅತಿ ಸಣ್ಣ ಹಗಲು ಇರುತ್ತದೆ. ಆ ಮೇಲೆ ಪುನಃ ಕ್ರಮೇಣ ರಾತ್ರಿಯು ಕಡಿಮೆಯಾಗುತ್ತಲೂ ಹಗಲು ಹೆಚ್ಚಾಗುತ್ತಲೂ ಹೋಗಿ ಕಟ್ಟಕಡೆಗೆ ಮಾರ್ಚ ೨೧ ನೇ ತಾರೀಖಿನ ದಿವಸ ಪುನಃ ಹಗಲು-ರಾತ್ರಿಗಳು ೧೨ ತಾಸಿನವು ಆಗುತ್ತವೆ.

ಹಗಲು ದೊಡ್ಡದೂ ರಾತ್ರಿಯು ಸಣ್ಣದೂ ಇದ್ದಾಗ ನಮಗೆ ಬೇಸಿಗೆಯ ಕಾಲವಿರುತ್ತದೆ. ಅಂದರೆ ಪ್ರತಿ ದಿವಸ ನಮಗೆ ಸೂರ್ಯನ ಉಷ್ಣತೆಯು ಹೆಚ್ಚು ವೇಳೆಯ ವರೆಗೆ ಸಿಗುತ್ತಿರುತ್ತದೆ. ಇದರ ವಿರುದ್ಧವಾಗಿ ರಾತ್ರಿಯು ದೊಡ್ಡದಾಗಿ ಹಗಲು ಸಣ್ಣದಿದ್ದಾಗ, ಚಳಿಯು ಹೆಚ್ಚಾಗಿರುವದರಿಂದ ನಾವು ಅದಕ್ಕೆ ಚಳಿಗಾಲವೆಂದೆನ್ನುತ್ತೇವೆ.

ಸೂರ್ಯೋದಯ ಸೂರ್ಯಾಸ್ತಗಳಿಂದ ನಮಗೆ ದಿಕ್ಕುಗಳು ಗೊತ್ತಾಗುತ್ತವೆ. ಆದರೆ ಸೂರ್ಯನು ಸರಿಯಾಗಿ ಪೂರ್ವಕ್ಕೆ ವರುಷದೊಳಗೆ ಎರಡೇ ಸಾರೆ ಉದಯವಾಗುತ್ತಾನೆ. ಆದ್ದರಿಂದ ಉಳಿದ ವೇಳೆಯಲ್ಲಿ ಸರಿಯಾದ ದಿಕ್ಕುಗಳನ್ನು ತಿಳಿದುಕೊಳ್ಳಲಿಕ್ಕೆ ಒಂದು ಪ್ರಕಾರದ ಯಂತ್ರವನ್ನು ಉಪಯೋಗಿಸುತ್ತಾರೆ. ಇದಕ್ಕೆ '**ಹೋಕಾಯಂತ್ರ**'ವೆಂದೆನ್ನುತ್ತಾರೆ.

ಸಮುದ್ರದ ಮೇಲಿನ ಉಗಿಹಡಗಗಳಿಗೆ ದಿಕ್ಕು ತಿಳಿದುಕೊಳ್ಳಲಿಕ್ಕೆ ಈ ಯಂತ್ರದ ಉಪಯೋಗವು ಹೆಚ್ಚಾಗಿ ಆಗುತ್ತದೆ. ಇದಕ್ಕೆ ಮಚ್ಛ ಯಂತ್ರವೆಂದೂ ಅನ್ನುವದುಂಟು. ಈ ಯಂತ್ರದ ಸಹಾಯದಿಂದ ಉತ್ತರ ದಕ್ಷಿಣ ದಿಕ್ಕುಗಳನ್ನು ತಿಳಿದುಕೊಳ್ಳಲಿಕ್ಕೆ ಬರುತ್ತದೆ. ಉತ್ತರ ದಿಕ್ಕು ಗೊತ್ತಾಯಿತೆಂದರೆ ಉಳಿದ ಎಲ್ಲ ದಿಕ್ಕುಗಳು ಗೊತ್ತಾಗುತ್ತವೆ.

ಲೋಹಚುಂಬಕದ ಒಂದು ಉಕ್ಕಿನ ಪಟ್ಟಿಯನ್ನು ಮೊಣಚೆಯಾದ ಒಂದು ಮೊಳೆಯ ಮೇಲೆ ಕೂಡ್ರಿಸುತ್ತಾರೆ. ಈ ಮೊಳೆಯನ್ನು ಬಹುತರವಾಗಿ ಕಲ್ಲಿನಿಂದ ಮಾಡಿರುತ್ತಾರೆ. ಪೃಥ್ವಿಯ ಗೋಲದೊಳಗಿರುವ ಚುಂಬಕದಿಂದ ಈ ಚುಂಬಕದ ಪಟ್ಟಿಯು ಯಾವಾಗಲೂ ದಕ್ಷಿಣೋತ್ತರವಾಗಿ ನಿಲ್ಲುತ್ತದೆ.

ಆದ್ದರಿಂದ ದಿಕ್ಕುಗಳು ಸುಲಭವಾಗಿ ತಿಳಿಯುತ್ತವೆ. ಈ ಯಂತ್ರದ ಹತ್ತಿರ ಕಬ್ಬಿಣವನ್ನು ತಂದರೆ ಯಂತ್ರದೊಳಗಿನ ಪಟ್ಟಿಯು ಸರಿಯುತ್ತದೆ. ಮತ್ತು ಸರಿಯಾಗಿ ದಿಕ್ಕನ್ನು ತೋರಿಸಲಾರದು. ಇತ್ತಲಾಗಿ ತಯಾರಿಸಿದ ಉಗಿ ಹಡಗಗಳು ಕಬ್ಬಿಣ ಉಕ್ಕುಗಳಿಂದ ತಯಾರಿಸಲ್ಪಟ್ಟಿರುತ್ತವೆ. ಆದ್ದರಿಂದ ಹೋಕಾಯಂತ್ರದೊಳಗೆ ತಪ್ಪುತಡೆಗಳಾಗಬಾರದಂತೆ ಏರ್ಪಾಡು ಮಾಡಿರುತ್ತ




ಆಕೃತಿ ೭೭ ಹೋಕಾಯಂತ್ರ

ಇಂಥದೊಂದು ಉಕ್ಕಿನ ಮುಳ್ಳನ್ನು ಒಂದು ಪೆಟ್ಟಿಗೆಯೊಳಗೆ ಕೂಡ್ರಿಸಿ ಅದರ ಮೇಲೆ ದಿಕ್ಕುಗಳನ್ನು ತೋರಿಸುವ ಗುರುತುಗಳುಳ್ಳ ಒಂದು ಕಾಗದದ ತಬಕವನ್ನು ಅಂಟಿಸುತ್ತಾರೆ. ಪೆಟ್ಟಿಗೆಯ ತಳಕ್ಕೂ ಮತ್ತು ಈ ತಬಕಕ್ಕೂ, ನಡುವೆ ಚುಂಬಕದ ಮುಳ್ಳು ಸುಲಭವಾಗಿ ತಿರುಗುವಷ್ಟು ಸ್ಥಳವಿರುತ್ತದೆ.

ಬೇರೆ ಬೇರೆ ನಕಾಶೆಗಳನ್ನು ತಯಾರು ಮಾಡುವಾಗ ಈ ಹೋಕಾಯಂತ್ರದ ಉಪಯೋಗವು ಬಹಳವಾಗುತ್ತದೆ.

## ಪ್ರಶ್ನೆಗಳು

೧. ನಿಮ್ಮ ಊರೊಳಗೆ ಅತಿ ದೊಡ್ಡ ಹಗಲು ಎಂದು ಇರುತ್ತದೆ? ಅತಿ ಸಣ್ಣ ಹಗಲು ಎಂದು ಇರುತ್ತದೆ?
೨. ಉತ್ತರಾಯಣ ದಕ್ಷಿಣಾಯನಗಳೆಂದರೇನು? ಅವುಗಳ ಅವಧಿಯು ಎಲ್ಲಿಂದ ಎಲ್ಲಿಯವರೆಗೆ ಇರುತ್ತದೆ?
೩. ಬೇಸಿಗೆಯಲ್ಲಿ ಉಷ್ಣತೆಯು ಏಕೆ ಹೆಚ್ಚಾಗುತ್ತದೆ? ವರುಷದಲ್ಲಿ ಸಮ ಹಗಲು ರಾತ್ರಿಗಳು ಎಂದು ಇರುತ್ತದೆ?
೪. ಹೋಕಾಯಂತ್ರವೆಂದರೇನು? ಅದರ ಉಪಯೋಗವೇನು?
೫. ಸೂರ್ಯನು ಒಂದೇ ಸ್ಥಳದಲ್ಲಿ ಉದಯವಾಗುವದಿಲ್ಲವೆಂದು ತೋರಿಸಲಿಕ್ಕೆ ಯಾವ ಪ್ರಯೋಗವನ್ನು ಮಾಡುವಿರಿ?

ಪಾಠ ೩೫

# ಋತುಮಾನದೊಳಗಿನ ಹೆಚ್ಚುಕಡಿಮೆಯೂ, ಜನಜೀವನವೂ

ಪೃಥ್ವಿಯು ಸೂರ್ಯನ ಸುತ್ತಲೂ ತಿರುಗುವಾಗ ಅದರ ಕೆಲಭಾಗವು ೧೨ ತಾಸುಗಳಿಗಿಂತ ಹೆಚ್ಚುಕಾಲ ಸೂರ್ಯ ಪ್ರಕಾಶದೊಳಗೆ ಉಳಿಯುತ್ತದೆ. ಕೆಲವು ದಿವಸಗಳಾದ ಬಳಿಕ ಅದೇ ಭಾಗದಲ್ಲಿ ಹಗಲು ಸಣ್ಣದಾಗುವದರಿಂದ ಅದು ಸೂರ್ಯನ ಪ್ರಕಾಶದೊಳಗೆ ಕಡಿಮೆ ಕಾಲ ಉಳಿಯುತ್ತದೆ. ಇದರಿಂದ ನಾವು ಋತುಮಾನದಲ್ಲಿ ಹೆಚ್ಚುಕಡಿಮೆಯಾಯಿತೆಂದು ಅನ್ನುತ್ತೇವೆ. ಈ ಪ್ರಕಾರವಾಗಿ ಋತುಮಾನಗಳಲ್ಲಿ ಬದಲಾವಣೆಯಾಗಲು ನಮ್ಮ ಪ್ರತಿ ದಿವಸದ ಜೀವನದಲ್ಲಿಯೂ ಕೂಡ ಬದಲಾವಣೆಯಾಗುವುದು ಕಂಡು ಬರುತ್ತದೆ. ನಾವು ಇಡೀ ವರುಷದಲ್ಲೆಲ್ಲ ಬೇರೆ ಬೇರೆ ಹಬ್ಬ-ಹುಣ್ಣಿವೆಗಳನ್ನು ಆಚರಿಸುತ್ತೇವೆ. ಅವುಗಳೊಳಗಿನ ಮುಖ್ಯವಾದ ಹಬ್ಬಗಳ ಬಗ್ಗೆ ನಾವು ವಿಚಾರಿಸಿದರೆ, ಋತು ಮಾನಗಳಂತೆ ಸೃಷ್ಟಿಯಲ್ಲಿ ಆಗುವ ಬದಲಾವಣೆಗಳ ಪ್ರತಿಬಿಂಬಗಳೇ ನಮ್ಮ ನಡೆನುಡಿಗಳಲ್ಲಿ ಒಡಮೂಡಿದ್ದು ಕಾಣುತ್ತದೆ.

ನಮ್ಮ ಹೊಸ ವರುಷವು ಯುಗಾದಿಯಿಂದ ಅಂದರೆ ಚೈತ್ರಮಾಸದ ಪ್ರತಿಪದೆಯಿಂದ ಆರಂಭವಾಗುತ್ತದೆ. ಅದಕ್ಕೆ ನಾವು ವರ್ಷ ಪ್ರತಿಪದೆ ಎಂದು

ಅನ್ನುತ್ತೇವೆ. ಮತ್ತು ಆ ಹೊತ್ತಿನ ದಿವಸ ದೊಡ್ಡ ಹಬ್ಬವನ್ನು ಆಚರಿಸುತ್ತೇವೆ. ಆ ದಿನ ಎಲ್ಲರೂ ಎರಕೊಂಡು ಹೊಸಿಕೊಂಡು, ಹೊಸ ಅರಿವೆ ತೊಟ್ಟುಕೊಳ್ಳುತ್ತಾರೆ. ಹಿತ್ತಲು ಅಂಗಳಗಳನ್ನೆಲ್ಲ ಉಡುಗಿ ರಂಗವಲ್ಲಿಯನ್ನು ಹಾಕಿ ತೋರಣದೊಂದಿಗೆ ಗುಡಿಯನ್ನು ನಿಲ್ಲಿಸುತ್ತಾರೆ. ಆ ಹೊತ್ತಿನ ದಿವಸ [redacted] ಹುರುಪು ಕಂಡುಬರುತ್ತದೆ. ಪಶು, ಪಕ್ಷಿ, ಗಿಡಬಳ್ಳಿಗಳೂ ಕೂಡ ಸಂತೋಷದಲ್ಲಿರುತ್ತವೆ. ನೋಡಿದಲ್ಲೆಲ್ಲ ಹೂಗಳು ಅರಳುತ್ತವೆ. ದೊಡ್ಡ ಗಿಡಗಳು ಚಿಗಿಯಲಾರಂಭಿಸುತ್ತವೆ. ಚಳಿಗಾಲದ ಚಳಿಯು ಅಡಗಿ, ಹಗಲು ಕ್ರಮೇಣ ದೊಡ್ಡದಾಗುತ್ತದೆ. ಸಾವಕಾಶವಾಗಿ ಬೇಸಿಗೆಯು ಆರಂಭವಾಗುತ್ತದೆ. ಒಕ್ಕಲಿಗರು ಕೆಲಸಮಾಡಲಿಕ್ಕೆ ಆರಂಭಿಸುತ್ತಾರೆ.

ಮನೆಗಳನ್ನು ದುರುಸ್ತು ಮಾಡುವದು, ಉರುವಲವನ್ನು ಕೂಡಿ ಹಾಕುವದು ಮುಂತಾದ ಮನೆಕೆಲಸಗಳನ್ನು ಈಗ ಮುಗಿಸಬೇಕಾಗಿರುತ್ತದೆ. ಇದಲ್ಲದೆ ಹೊಲದಲ್ಲಿಯೂ ಕೆಲಸವಿರುತ್ತದೆ. ರಂಟೆ ಹೊಡೆದು ಕೋಲಿಗಳನ್ನು ಆರಿಸಿ ನೆಲವನ್ನು ತಯಾರುಮಾಡಬೇಕಾಗುತ್ತದೆ. ಹೊಲದೊಳಗಿನ ಒಡ್ಡು ಒಡಕಲಗಳನ್ನು ಸರಿಮಾಡಿಕೊಳ್ಳಬೇಕಾಗುತ್ತದೆ. ಸವತೇಕಾಯಿ, ಪಡುವಲು, ಕುಂಬಳಕಾಯಿ ಮುಂತಾದ ಕಾಯಿಪಲ್ಯೆಗಳ ಬೀಜವನ್ನು ಹಾಕುತ್ತಾರೆ. ಆ ಕಾಲಕ್ಕೆ ಬಿರುಗಾಳಿ ಬೀಸಿ ಅಡಮಳೆಗಳಾಗುತ್ತವೆ. ಈ ಮಳೆಯಿಂದ ಒಕ್ಕಲಿಗನಿಗೆ ಉಪಯೋಗವಾಗುತ್ತದೆ. ಭೂಮಿಯು ಮಿದುವಾಗಿ ರಂಟೆ ಹೊಡೆಯಲಿಕ್ಕೆ ಸುಲಭವಾಗುತ್ತದೆ. ಯುಗಾದಿಯಾದ ಬಳಿಕ ಒಕ್ಕಲಿಗರು ದನಗಳನ್ನು ಕಟ್ಟಿಕೊಂಡು ಹೊಲದಲ್ಲಿಯೇ ಇರಹತ್ತುತ್ತಾರೆ. ಇದೇ ಕಾಲಕ್ಕೆ ಮಾವು ಮತ್ತು ಅಂಜೂರಿ ಹಣ್ಣುಗಳು ಬರುತ್ತವೆ. ಕೊಂಕಣದೊಳಗೆ ಮಾವು, ಹಲಸು, ಗೋಡಂಬೆ ಮುಂತಾದ ಹಣ್ಣುಗಳು ಆಗುತ್ತವೆ.

ಕೊಂಕಣದೊಳಗಾದರೂ ಒಕ್ಕಲಿಗನು ಈಗ ಬಹಳ ದುಡಿಯುತ್ತಿರುತ್ತಾನೆ. ಗಿಡಗಳ ಎಲೆ ಮುಂತಾದುವುಗಳನ್ನು ಕೂಡಿಹಾಕಿ ಹೊಲದೊಳಗೆ ಹರವಿ ಸುಡುತ್ತಾನೆ. ಗಿಡಗಳು ಚಿಗಿಯುವದರಿಂದ ಹಳೇ ಎಲೆಗಳೆಲ್ಲ ಉದುರಿ ಬೊಡ್ಡೆಗಳ ಹತ್ತರ ಸಾಕಷ್ಟು ಒಣ ಎಲೆಗಳಿರುತ್ತವೆ. ಅದನ್ನೆಲ್ಲ ತಂದು ಹೊಲದೊಳಗೆ ಸುಡಲು ನೆಲದ ಕಸುವು ಬೆಳೆಯುತ್ತದೆ.

ಆ ಮೇಲೆ ಮೃಗನಕ್ಷತ್ರವು ಬರಲು ಮಳೆಗಾಲವು ಆರಂಭವಾಗುತ್ತದೆ. ಮುಂಗಾರಿಯ ಬೆಳೆಯ ತತಿಯು ಆರಂಭವಾಗುವದು. ಸಾಕಷ್ಟು ಮಳೆ

ಯಾಗಲು, ಒಕ್ಕಲಿಗನು ಹೊಲಗಳನ್ನು ಹರಗಿ ಬಿತ್ತುವನು. ಶ್ರಾವಣಮಾಸದ ವರೆಗೆ ಒಕ್ಕಲಿಗನೂ ಅವನ ಎತ್ತುಗಳೂ ಕೆಲಸದಲ್ಲಿ ತೊಡಗುವವು. ಶ್ರಾವಣ ಮಾಸದ ಆರಂಭಕ್ಕೆ ಮುಂಗಾರಿಯ ಬೆಳೆಯೊಳಗಿನ ಕಸತೆಗೆದು, ಹಿಂಗಾರಿಯ ಸಲುವಾಗಿ ಕಾದಿಟ್ಟ ನೆಲವನ್ನು ಹರಗಲಾಗುವುದು. ಇದಾದ ಮೇಲೆ ತುಸು ದಿವಸಗಳ ವರೆಗೆ ಹೊಲ ಕೆಲಸದಿಂದ ಬಿಡುವು ದೊರಕುವುದು. ಆಗ ಸಾಕಷ್ಟು ಹಸೀ ಹುಲ್ಲು ಆಗಿ ದನಗಳೆಲ್ಲ ಮೇದು ಪುಷ್ಟವಾಗುತ್ತವೆ. ಶ್ರಾವಣ ತಿಂಗಳ ಅಮಾವಾಸ್ಯೆಗೆ ಒಕ್ಕಲಿಗರು ಮಣ್ಣೆತ್ತಿನ ಹಬ್ಬವನ್ನು ಆನಂದದಿಂದ ಆಚರಿಸುವರು. ಎತ್ತುಗಳಿಗೆ ಆಭರಣಗಳನ್ನಿಟ್ಟು, ಕೋಡುಗಳಿಗೆ ಬಣ್ಣ ಕೊಟ್ಟು ಊದುತ್ತ ಬಾರಿಸುತ್ತ ಎತ್ತುಗಳನ್ನು ಊರೊಳಗೆ ಮೆರೆಸುತ್ತಾರೆ. ಆ ಹೊತ್ತಿನ ದಿವಸ ಹೋಳಿಗೆ ಹುಗ್ಗಿಗಳನ್ನು ಮಾಡಿ ಎಲ್ಲ ಜನರು ಆನಂದ ದಿಂದ ವೇಳೆ ಕಳೆಯುವರು. ಆ ಮೇಲೆ ತುಸು ದಿವಸಗಳಲ್ಲಿಯೇ ಒಕ್ಕಲಿಗ ನಿಗೆ ಪುನಃ ಕೆಲಸದ ಆರಂಭ ಮಾಡಬೇಕಾಗುತ್ತದೆ. ಭಾದ್ರಪದ ತಿಂಗಳಿನಲ್ಲಿ ಹಿಂಗಾರಿಯ ಬಿತ್ತಿಗೆಗೆ ಆರಂಭವಾಗುತ್ತದೆ. ಮೊದಲು ಬಿಳೆ ಜೋಳ, ಆ ಮೇಲೆ ಗೋದಿ, ಕಡಲೆಗಳನ್ನು ಬಿತ್ತುತ್ತಾರೆ. ಇದೇ ವೇಳೆಗೆ ಹೆಸರು, ಉದ್ದು ಮುಂತಾದ ಅಡಗಾಳುಗಳು ಸಿದ್ಧವಾಗಿರುತ್ತವೆ. ಆಶ್ವೀನ ತಿಂಗಳಿನ ಸುಮಾರಿಗೆ ಜೋಳ, ಸಜ್ಜೆ ಮುಂತಾದ ಮುಂಗಾರಿ (ಖರೀಪ) ಬೆಳೆಗಳನ್ನು ತೆಗೆದು ಗೂಡಕಟ್ಟಿ ರಾಶೀ ಮಾಡುತ್ತಾರೆ. ಮಣ್ಣೆತ್ತಿನ ಅಮಾವಾಸ್ಯೆಯಿಂದ ದೀಪಾವಳಿಯ ವರೆಗೆ ಒಕ್ಕಲಿಗರು ಕೆಲಸದಲ್ಲಿ ತೊಡಗಿರುತ್ತಾರೆ.

ಆ ಮೇಲೆ ದೀಪಾವಳಿಯ ಹಬ್ಬವು ಬರುವದು. ಆಗ ಮಳೆಗಾಲವು ಮುಗಿದು ಚಳಿಗಾಲಕ್ಕೆ ಆರಂಭವಾಗುವದು. ಮುಂಗಾರಿಯ ಸುಗ್ಗಿಯು ಈಗ ಒಕ್ಕಲಿಗನ ಮನೆಗೆ ಬಂದಿರುವದು. ಅವನು ಆನಂದದಿಂದ ದೀಪಾ ವಳಿಯ ಹಬ್ಬವನ್ನು ಮಾಡುವನು. ಆಗ ಹೈನು ಹಾಲುಗಳು ಸಾಕಷ್ಟು ಸಿಗುವವು.

ದೀಪಾವಳಿಯಾದ ಬಳಿಕ ಸಂಕ್ರಾಂತಿಯ ಹಬ್ಬವು ಬರುವದು. ಆಗ ಹಗಲು ಸಣ್ಣದಾಗಿಯೂ ರಾತ್ರಿಯು ದೊಡ್ಡದಾಗಿಯೂ ಇರುತ್ತವೆ. ಆಗ ಚಳಿಯಾದರೂ ಹೆಚ್ಚಾಗಿರುತ್ತದೆ. ಮುಂಗಾರಿಯ ಬೆಳೆಗಳಿಗೆ ತೆನೆಯಾಗಲಿಕ್ಕೆ ಆರಂಭವಾಗಿ ಕಾಳು ತುಂಬ ಹತ್ತುತ್ತವೆ. ಕಬ್ಬಿನ ಗಾಣಗಳು ಆರಂಭವಾಗಿ ಪೇಟೆಗೆ ಹೊಸ ಬೆಲ್ಲವು ಬರಹತ್ತುತ್ತದೆ. ಸಂಕ್ರಾಂತಿಯ ದಿವಸ ನಾವು

ಎಳ್ಳು ಬೆಲ್ಲವನ್ನು ತಿಂದು, ಹಬ್ಬವನ್ನು ಆಚರಿಸುತ್ತೇವೆ. ಇದೇ ಸುಮಾರಿಗೆ ಕೊಂಕಣದಲ್ಲಿ ಮಾವು, ಗೋಡಂಬೆಗಳ ಗಿಡಗಳಿಗೆ ಹೂಬಿಟ್ಟು ಕಾಯಿಗಳು ಕಾಣಹತ್ತುತ್ತವೆ. ಅದರಂತೆ ಹೊಲಗಳಲ್ಲಿ ಅವರೆ, ತೊಗರಿ, ಮುಂತಾದ ಅಡಗಾಳುಗಳು ತಯಾರಾಗುತ್ತಿರುತ್ತವೆ. ಘಟ್ಟದ ಕೆಳಗೂ (ಕೊಂಕಣ) ಘಟ್ಟದ ಮೇಲೆ (ದೇಶ)ಯೂ ಸಂಕ್ರಾಂತಿಯ ಹಬ್ಬವನ್ನು ಆನಂದದಿಂದ ಆಚರಿಸುತ್ತಾರೆ. ಇನ್ನು ಮುಂದೆ ರಾತ್ರಿಗಳು ಸಣ್ಣವಾಗುತ್ತಲೂ ಹಗಲುಗಳು ದೊಡ್ಡವಾಗುತ್ತಲೂ ಹೋಗುವವು. ಕ್ರಮೇಣ ಚಳಿಯಾದರೂ ಕಡಿಮೆಯಾಗುತ್ತ ಹೋಗುತ್ತದೆ.

ಇದಾದ ಮೇಲೆ ಹಿಂಗಾರಿಯ ಬೆಳೆಯು ಬರುತ್ತದೆ. ಹೋಳೀ ಹುಣ್ಣಿವೆಗೆ ಬೆಳೆತೆಗೆದು, ಗೂಡುಬಡಿದು, ರಾಶೀ ಮಾಡುತ್ತಾರೆ. ಹಿಂಗಾರಿಯ ಬೆಳೆಯು ಚನ್ನಾಗಿ ಬಂದಿತೆಂದರೆ ಒಕ್ಕಲಿಗನು ಹೋಳಿಹುಣ್ಣಿವೆಯ ಹಬ್ಬವನ್ನು ಸುಖದಿಂದ ಮಾಡುತ್ತಾನೆ.

## ಪ್ರಶ್ನೆಗಳು

೧. ನಿಮ್ಮ ಊರಲ್ಲಿ ಬೇಸಿಗೆಯಲ್ಲಿ ಒಕ್ಕಲಿಗರು ಯಾವ ಯಾವ ಕೆಲಸ ಮಾಡುವರು?

೨. ಮುಖ್ಯವಾದ ಹಬ್ಬಗಳು ಯಾವವು? ಅವು ಯಾವ ತಿಂಗಳಿನಲ್ಲಿ ಬರುತ್ತವೆ?

೩. ನಿಮಗೆ ಯಾವ ಹಬ್ಬಗಳು ಹೆಚ್ಚಾಗಿ ಸೇರುತ್ತವೆ? ಯಾಕೆ?

೪. ಮುಂಗಾರಿ ಮತ್ತು ಹಿಂಗಾರೀ ಬೆಳೆಗಳು ಯಾವವು?

೫. 'ಮಕರ ಸಂಕ್ರಾಂತಿ' ಅಂದರೇನು? ಆಗ ನಿಮ್ಮ ಊರಿನ ಹವೆಯು ಹೇಗೆ ಇರುತ್ತದೆ?

Geography for Class V, Kanarese (Namma Vishwa), Book I.
By C. B. Joshi, M. A. (Bombay), B. A. (Cantab) and K. N Deshpande
B. Sc., B. T. 1953. Price Re. 1-4.